ಮೇಲ್ಕಂಡ ಸ್ಥಿರಾಸ್ತಿಯ ವರ್ಗಾವಣೆಯನ್ನು ಸುಸ್ತಿದಾರರು ಪಾವತಿಸಬೇಕಾಗಿರುವ ಭಾಗಶಃ ಸಾಲ ವಸೂಲಿಗಾಗಿ ವರ್ಗಾವಣೆ ಮಾಡಲಾಗಿದೆ.

ಈ ಆದೇಶವನ್ನು ನನ್ನ ಸಹಿ ಮತ್ತು ಮೊಹರಿನೊಂದಿಗೆ ದಿನಾಂಕ: 21.9.2004 ರಂದು ನೀಡಲಾಗಿದೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ ವಸೂಲಾಧಿಕಾರಿ,
ಪಿ.ಆರ್. 1428 ಕರ್ನಾಟಕ ರಾಜ್ಯ ಕೈಗಾರಿಕಾ ಸಹಕಾರ ಬ್ಯಾಂಕ್ ನಿಯಮಿತ, ಬೆಂಗಳೂರು.

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ ನಿಯಮ 441 ರನ್ವಯ ವಸೂಲಾಧಿಕಾರಿ, ಕರ್ನಾಟಕ ರಾಜ್ಯ ಕೈಗಾರಿಕಾ ಸಹಕಾರ ಬ್ಯಾಂಕ್ ನಿಯಮಿತ, ಬೆಂಗಳೂರು-4, ಇವರ ನಡವಳಿಕೆಗಳು**

**ಸಂಖ್ಯೆ: ಸನಿವ/ಯಾ.ಸ್ಥಿರೀಕರಣ/2004-05/242, ದಿನಾಂಕ: 21ನೇ ಸೆಪ್ಟೆಂಬರ್ 2004**

**ವಿಷಯ:** ಶ್ರೀ ಎಂ.ಟಿ. ಪ್ರಕಾಶ್ ಬಿನ್ ತಿಪ್ಪಣ್ಣ, ಚಿಕ್ಕಗೊಂಡನಹಳ್ಳಿ ಅಂಚೆ, ಚಿತ್ರದುರ್ಗ ತಾಲ್ಲೂಕು ಮತ್ತು ಇತರರು, ಸಿ.ಇ.ಪಿ. ನಂ.5/98-99ರ, ಇವರ ಸ್ಥಿರಾಸ್ತಿಯ ಮಾರಾಟದ ಸ್ಥಿರೀಕರಣದ ಬಗ್ಗೆ.

**ಉಲ್ಲೇಖ:** ಮಾರಾಟಾಧಿಕಾರಿ, ಚಿತ್ರದುರ್ಗ, ಶಾಖೆ ಇವರ ಪತ್ರ ಕ್ರ.ಸಂ. ಕೆಆರ್‌ಕೆಎಸ್‌ಬಿ/ಎಸ್‌ಎಂಜಿ/100/2004-05, ದಿನಾಂಕ: 17.05.2004.

**ಪ್ರಸ್ತಾವನೆ:**

ಶ್ರೀ ಎಂ.ಟಿ. ಪ್ರಕಾಶ್ ಬಿನ್ ತಿಪ್ಪಣ್ಣ, ಚಿಕ್ಕಗೊಂಡನಹಳ್ಳಿ ಅಂಚೆ, ಚಿತ್ರದುರ್ಗ ತಾಲ್ಲೂಕು ಮತ್ತು ಇತರರು, ಇವರು ಕರ್ನಾಟಕ ರಾಜ್ಯ ಕೈಗಾರಿಕಾ ಸಹಕಾರ ಬ್ಯಾಂಕ್ ನಿ., ಚಿತ್ರದುರ್ಗ ಶಾಖೆಯಿಂದ ಸಾಲ ಪಡೆದು ಸಕಾಲದಲ್ಲಿ ಅಸಲು ಮತ್ತು ಬಡ್ಡಿಯನ್ನು ಮರುಪಾವತಿಸದ ಕಾರಣ ಸದರಿ ಸುಸ್ತಿದಾರರ ಮೇಲೆ ಸಹಕಾರ ಸಂಘಗಳ ಕಾಯ್ದೆಯಡಿ ಸಂಬಂಧಪಟ್ಟ ಅಧಿಕಾರಿಗಳ ನ್ಯಾಯಾಲಯದಲ್ಲಿ ದಾವೆ ಹೂಡಿ ಸುಸ್ತಿಸಾಲ ವಸೂಲಾತಿಗಾಗಿ ಸದರಿಯವರ ವಿರುದ್ಧ ದಿನಾಂಕ: 29.11.1997 ರಂದು ಅವಾರ್ಡ್ ನಂ.ಆರ್‌ಸಿಎಸ್: ಡಿಡಿಎಸ್:ಡಿ7:3251:1996/1996-97ನ್ನು ಪಡೆದ ನಂತರವು ಬಾಕಿದಾರರು ಸಾಲ ಮರುಪಾವತಿ ಮಾಡದ ಕಾರಣ ಡಿಕ್ರಿದಾರ ಬ್ಯಾಂಕ್ ಸದರಿಯವರ ವಿರುದ್ಧ ಸಿ.ಇ.ಪಿ. ನಂ.5/1998-99 ರಂತೆ ಅಮಲ್ಜಾರಿ ಆದೇಶ ಪಡೆದು ಅಮಲ್ಜಾರಿ ಕಡತವನ್ನು ಮುಂದಿನ ಕ್ರಮಕ್ಕಾಗಿ ಬ್ಯಾಂಕಿನ ಮಾರಾಟಾಧಿಕಾರಿಯವರಿಗೆ ವಹಿಸಿಕೊಡಲಾಗಿತ್ತು. ಸದರಿ ಮಾರಾಟಾಧಿಕಾರಿಗಳು ಅಮಲ್ಜಾರಿ ಪ್ರಕರಣದ ವಿಲೇವಾರಿ ಮತ್ತು ಸುಸ್ತಿಸಾಲ ವಸೂಲಾತಿಗಾಗಿ ಸಹಕಾರ ಸಂಘಗಳ ಕಾಯ್ದೆಯಡಿ ಸುಸ್ತಿದಾರರಿಗೆ ಸೇರಿದ ಕೆಳಕಂಡ ಷೆಡ್ಯೂಲ್ ಸ್ಥಿರಾಸ್ತಿಯನ್ನು ಅಂತಿಮವಾಗಿ ದಿನಾಂಕ: 24.02.2004 ರಂದು ಬಹಿರಂಗ ಹರಾಜಿಗೆ ಒಳಪಡಿಸಿದ್ದು ಅಂದು ನಡೆದ ಹರಾಜಿನಲ್ಲಿ ಭಾಗವಹಿಸಿದವರ ಪೈಕಿ ಶ್ರೀ ತಾಜ್ ಮಹಮದ್ ಬಿನ್ ಹಯಾತ್ ಬಾಷಾ, ಅಗಸನಕಲ್ಲು, ಚಿತ್ರದುರ್ಗ, ಇವರು ಅತಿ ಹೆಚ್ಚಿನ ಮೊತ್ತ ರೂ.51,000/- ಕ್ಕೆ (ಐವತ್ತೊಂದು ಸಾವಿರ ರೂಪಾಯಿಗಳು ಮಾತ್ರ) ಬಿಡ್ ಮಾಡಿರುತ್ತಾರೆ. ಮಾರಾಟಾಧಿಕಾರಿಗಳು, ಚಿತ್ರದುರ್ಗ ಶಾಖೆ ಬಿಡ್‌ನ್ನು ಶ್ರೀ ತಾಜ್ ಮೊಹಮದ್ ರವರ ರವರ ಹೆಸರಿಗೆ ಸಲ್ಲಿಸಿ ಮುಂದಿನ ಕ್ರಮಕ್ಕಾಗಿ ಹರಾಜಿನ ದಾಖಲೆಗಳನ್ನು ಈ ಕಛೇರಿಗೆ ಸಲ್ಲಿಸಿರುತ್ತಾರೆ. ಆದ್ದರಿಂದ ಮುಂದಿನ ಕಾನೂನು ನಡವಳಿಕೆಗಳನ್ನು ನಡೆಸುವ ಅನಿವಾರ್ಯತೆ ಉಂಟಾಗಿರುತ್ತದೆ. ಮಾರಾಟಾಧಿಕಾರಿ, ಚಿತ್ರದುರ್ಗ ಶಾಖೆ ಇವರು ಈ ಕಛೇರಿಗೆ ಸಲ್ಲಿಸಿರುವ ಮಾರಾಟದ ನಡವಳಿಕೆಗಳನ್ನು ಹಾಗೂ ದಾಖಲೆಗಳನ್ನು ಪರಿಶೀಲಿಸಿದಾಗ, ಮಾರಾಟದ ನಡವಳಿಕೆಗಳು ಕರ್ನಾಟಕ ಸಹಕಾರ ಸಂಘಗಳ ನಿಯಮ 1960 ರನ್ವಯ ರೂ.38(2)(ಡಿ)ರ ಪ್ರಕಾರ ಕ್ರಮ ಜರುಗಿಸಿರುವುದು ಕಂಡುಬಂದಿರುತ್ತೆ. ಆದ್ದರಿಂದ ಮುಂದಿನ ಕಾನೂನು ನಡವಳಿಕೆಗಳನ್ನು ನಡೆಸುವ ಅನಿವಾರ್ಯತೆ ಉಂಟಾಗಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ ಮಾಡಲಾಗಿದೆ.

**ಆದೇಶ**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ ಸಹಕಾರ ಸಂಘಗಳ ನಿಯಮ 1960 ನಿಯಮ 38(6)(ಎ) ಅನ್ವಯ ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ ವಸೂಲಾಧಿಕಾರಿ ನಿಯಮ 441, ಕರ್ನಾಟಕ ರಾಜ್ಯ ಕೈಗಾರಿಕಾ ಸಹಕಾರ ಬ್ಯಾಂಕ್ ನಿಯಮಿತ, ಬೆಂಗಳೂರು-4, ಆದ ನಾನು ಶ್ರೀ ಎಂ.ಟಿ. ಪ್ರಕಾಶ್ ಮತ್ತು ಶ್ರೀ ಅನ್ವರ್ ಬಾಷಾ, ಇವರಿಗೆ ಸೇರಿದ ಈ ಕೆಳಕಂಡ ಷೆಡ್ಯೂಲ್ ಸ್ಥಿರಾಸ್ತಿಯನ್ನು ದಿನಾಂಕ: 24.2.2004ರ ಬಹಿರಂಗ ಹರಾಜಿನಲ್ಲಿ ಅತಿಹೆಚ್ಚಿನ ಬಿಡ್ ಮೊತ್ತ ರೂ.51,000/- ಕ್ಕೆ (ಐವತ್ತೊಂದು ಸಾವಿರ ರೂಪಾಯಿಗಳು ಮಾತ್ರ)ಕ್ಕೆ ಬಿಡ್ ಮಾಡಿದ್ದ ಶ್ರೀ ತಾಜ್ ಮೊಹಮ್ಮದ್ ಬಿನ್ ಹಯಾತ್ ಬಾಷಾ, ಅಗಸನಕಲ್ಲು, ಚಿತ್ರದುರ್ಗ, ಇವರ ಹೆಸರಿಗೆ ಈ ಕೂಡಲೇ ಜಾರಿಗೆ ಬರುವಂತೆ ಎಲ್ಲಾ ಹಕ್ಕು ಸ್ವಾಮ್ಯ ಪತ್ರಗಳನ್ನು ವರ್ಗಾವಣೆ ಮಾಡಿ ಮಾರಾಟ ಸ್ಥಿರೀಕರಣದ ಆದೇಶವನ್ನು ನೀಡಿರುತ್ತೇನೆ.

**ಷೆಡ್ಯೂಲ್ ಸ್ಥಿರಾಸ್ತಿಯ ವಿವರ**

ಖಾಲಿ ನಿವೇಶನ ಖಾತೆ ನಂ.80/ಬಿ, ಇದರ ಅಳತೆ 25 ನಿ 86 ಅಡಿಗಳು, ಅಗಸನಕಲ್ಲು, ಚಿತ್ರದುರ್ಗ ಇದಕ್ಕೆ ಚೆಕ್ಕುಬಂದಿ:

**ಚಿತ್ರದುರ್ಗ ಇದಕ್ಕೆ ಚೆಕ್ಕುಬಂದಿ:**

| | | | |
|---|---|---|---|
| ಪೂರ್ವಕ್ಕೆ : ಖಾಲಿ ಜಾಗ | ಪಶ್ಚಿಮಕ್ಕೆ : ಖಾಲಿ ಜಾಗ | ಉತ್ತರಕ್ಕೆ : ಕಾಂಪೌಂಡ್ | ದಕ್ಷಿಣಕ್ಕೆ : ರಸ್ತೆ |

ಮೇಲ್ಕಂಡ ಸ್ಥಿರಾಸ್ತಿಯ ವರ್ಗಾವಣೆಯನ್ನು ಸುಸ್ತಿದಾರರು ಪಾವತಿಸಬೇಕಾಗಿರುವ ಭಾಗಶಃ ಸಾಲ ವಸೂಲಿಗಾಗಿ ವರ್ಗಾವಣೆ ಮಾಡಲಾಗಿದೆ.

ಈ ಆದೇಶವನ್ನು ನನ್ನ ಸಹಿ ಮತ್ತು ಮೊಹರಿನೊಂದಿಗೆ ದಿನಾಂಕ: 21.9.2004 ರಂದು ನೀಡಲಾಗಿದೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ ವಸೂಲಾಧಿಕಾರಿ,
ಪಿ.ಆರ್. 1429 ಕರ್ನಾಟಕ ರಾಜ್ಯ ಕೈಗಾರಿಕಾ ಸಹಕಾರ ಬ್ಯಾಂಕ್ ನಿಯಮಿತ, ಬೆಂಗಳೂರು.

**ಸಹಕಾರ ಸಂಘಗಳ ಅಪರ ನಿಬಂಧಕರು, (ಕೈಗಾರಿಕೆ ಮತ್ತು ಇತರೆ), ಸಹಕಾರ ಸಂಘಗಳ ನಿಬಂಧಕರ ಕಛೇರಿ, ಬೆಂಗಳೂರು-52 ಇವರ ನಡವಳಿಗಳು**

**ಆದೇಶ ಸಂಖ್ಯೆ: ಆರ್‌ಸಿಎಸ್:ಎಲ್‌ಕ್ಯೂಡಿ:01/2004-05, ದಿನಾಂಕ: 30ನೇ ಸೆಪ್ಟೆಂಬರ್ 2004**

**ವಿಷಯ:** ಶಿವಮೊಗ್ಗ ಜಿಲ್ಲಾ ಸ್ವಾತಂತ್ರ್ಯ ಹೋರಾಟಗಾರರ ಗೃಹನಿರ್ಮಾಣ ಸಹಕಾರ ಸಂಘಗಳ ನಿಯಮಿತ, ಶಿವಮೊಗ್ಗ ಇದನ್ನು ಸಮಾಪನೆಗೊಳಿಸುವ ಬಗ್ಗೆ.

**ಉಲ್ಲೇಖ:** 1) ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು ಇವರ ಪತ್ರ ಸಂಖ್ಯೆ: ಜೆಆರ್‌ಬಿ:ಎಲ್‌ಕ್ಯೂಡಿ:24:ಎಲ್‌ಎಂಡಿ:03-04, ದಿನಾಂಕ: 27.8.2003.

2) ಸಹಕಾರ ಸಂಘಗಳ ಉಪನಿಬಂಧಕರು, ಶಿವಮೊಗ್ಗ ಇವರ ಅ.ಸ.ಪ. ಸಂಖ್ಯೆ: ಡಿಆರ್‌ಎಸ್:ಸಮಾಪನೆ: ಡಿಎಲ್‌ಎಸ್:10:03-04/763.

**ಪ್ರಸ್ತಾವನೆ:**

ಶಿವಮೊಗ್ಗ ಜಿಲ್ಲಾ ಸ್ವಾತಂತ್ರ್ಯ ಹೋರಾಟಗಾರರ ಗೃಹ ನಿರ್ಮಾಣ ಸಹಕಾರ ಸಂಘ ನಿಯಮಿತ, ಶಿವಮೊಗ್ಗ ಈ ಸಂಘವು ಬೆಂಗಳೂರು ವಿಭಾಗದ ಸಂಯುಕ್ತ ನಿಬಂಧಕರ ಆದೇಶ ಸಂಖ್ಯೆ: ಜೆಆರ್‌ಬಿ:21-4-20222:94-95, ದಿನಾಂಕ: 13.10.1995 ರನ್ವಯ ನೋಂದಣಿ ಆಗಿದ್ದು, ಇದರ ಕಾರ್ಯವ್ಯಾಪ್ತಿಯು ಜಿಲ್ಲಾ ಮಟ್ಟದ್ದಾಗಿದೆ. ಸದರಿ ಸಂಘವು ತನ್ನ ಉಪನಿಯಮಗಳ ಉದ್ದೇಶಗಳ ರೀತ್ಯಾ ಹಾಗೂ ಸಹಕಾರ ಸಂಘಗಳ ಕಾಯ್ದೆ ನಿಯಮಗಳ ರೀತ್ಯಾ ಕಾರ್ಯನಿರ್ವಹಿಸದಿರುವ ಹಿನ್ನೆಲೆಯಲ್ಲಿ ಸಹಕಾರ ಸಂಘಗಳ ಜಂಟಿ ನಿಂಬಧಕರು, ಹಾಸನ ಪ್ರಾಂತ ಇವರು ಸಂಘದ ಆಡಳಿತ ಮಂಡಳಿಯನ್ನು ಕಲಂ 31 (1) ರನ್ವಯ ರದ್ದುಪಡಿಸಿ ವಿಶೇಷಾಧಿಕಾರಿಯವರು ಸಂಘದ ಪ್ರಭಾರ ವಹಿಸಿಕೊಂಡಿದ್ದು, ಆಡಳಿತ ಮಂಡಳಿ ಪುನರ್ರಚನೆಗೆ ಸಾಧ್ಯತೆ ಇಲ್ಲದಿರುವ ಬಗ್ಗೆ ಸ್ಪಷ್ಟಪಡಿಸಿದ್ದಾರೆ ಎಂದು ಉಲ್ಲೇಖ (1)ರ ಪತ್ರದಲ್ಲಿ ಸಂಯುಕ್ತ ನಿಬಂಧಕರು, ಬೆಂಗಳೂರು ರವರು ವರದಿಸಿರುತ್ತಾರೆ ಹಾಗೂ ಸಂಘದ 2000-2001ನೇ ಸಾಲುಗಳಿಂದ ಮಹಾಸಭೆಗಳು ನಡೆದಿರುವುದಿಲ್ಲ ಸಂಘವು ತನ್ನ ನೋಂದಣಿಯಾದ ಉದ್ದೇಶವನ್ನು ಈಡೇರಿಸುವಲ್ಲಿ ಸಂಪೂರ್ಣವಾಗಿ ವಿಫಲಗೊಂಡಿರುತ್ತದೆ ಎಂದು ವರದಿಸುತ್ತಾ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72(2) (ಬಿ) ಅನ್ವಯ ಸಂಘವನ್ನು ಸಮಾಪನೆಗೊಳಿಸುವುದು ಸೂಕ್ತವೆಂದು ಅಭಿಪ್ರಾಯ ಪಟ್ಟಿರುತ್ತಾರೆ.

ಈ ಮೇಲೆ ವಿವರಿಸಿರುವ ಅಂಶಗಳನ್ನು ಪರಿಶೀಲಿಸಿ ಮನಗಂಡು ನಿಷ್ಕ್ರಿಯಗೊಂಡಿರುವ ಶಿವಮೊಗ್ಗ ಜಿಲ್ಲಾ ಸ್ವಾತಂತ್ರ್ಯ ಹೋರಾಟಗಾರರ ಗೃಹನಿರ್ಮಾಣ ಸಹಕಾರ ಸಂಘ ನಿಯಮಿತ, ಶಿವಮೊಗ್ಗ ಇದನ್ನು ಸಮಾಪನೆಗೊಳಿಸುವುದು ಸೂಕ್ತವೆಂದು ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಆದೇಶ**

ಪ್ರಸ್ತಾವನೆಯಲ್ಲಿ ಪ್ರಸ್ತಾಪಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬಿ. ನಾಗರಾಜ, ಸಹಕಾರ ಸಂಘಗಳ ಅಪರ ನಿಬಂಧಕರು (ಕೈಗಾರಿಕೆ ಮತ್ತು ಇತರೆ), ಕೇಂದ್ರ ಕಛೇರಿ, ಬೆಂಗಳೂರು, ಆದ ನಾನು ಕರ್ನಾಟಕ ಸಹಕಾರ ಸಂಘ ಕಾಯ್ದೆ 1959ರ ಕಲಂ 72(2) (ಬಿ) ರೀತ್ಯಾ ದತ್ತವಾಗಿರುವ ಅಧಿಕಾರದನ್ವಯ ಶಿವಮೊಗ್ಗ ಜಿಲ್ಲಾ ಸ್ವಾತಂತ್ರ್ಯ ಹೋರಾಟಗಾರರ ಗೃಹನಿರ್ಮಾಣ ಸಹಕಾರ ಸಂಘ ನಿಯಮಿತ, ಶಿವಮೊಗ್ಗ, ಈ ಸಂಘವನ್ನು ಸಮಾಪನೆಗೊಳಿಸಿ ಆದೇಶ ಹೊರಡಿಸಿರುತ್ತೇನೆ ಮತ್ತು ಸಹಕಾರ ಸಂಘ ಕಾಯ್ದೆ ಕಲಂ 73ರ ಪ್ರಕಾರ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ಉಪವಿಭಾಗ, ಶಿವಮೊಗ್ಗ ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಿಸಿರುತ್ತೇನೆ.

ಸಮಾಪನಾಧಿಕಾರಿಗಳು ಸಂಘದ ಪ್ರಭಾರವನ್ನು ವಹಿಸಿಕೊಂಡು ಪ್ರಭಾರ ಪಟ್ಟಿಯ ಪ್ರತಿಯನ್ನು ಈ ಕಛೇರಿಗೆ ಸಲ್ಲಿಸತಕ್ಕದ್ದು. ಕರ್ನಾಟಕ ಸಹಕಾರ ಸಂಘ ಕಾಯ್ದೆ 1959ರ ಕಲಂ 74 ಮತ್ತು ನಿಯಮ 33 ರಂತೆ ಸಮಾಪನಾಧಿಕಾರಿಯು ಕರ್ತವ್ಯ ನಿರ್ವಹಿಸತಕ್ಕದ್ದು ಹಾಗೂ ಇತ್ತೀಚಿನ ಲೆಕ್ಕ ಪರಿಶೋಧನಾ ವರದಿಯ ಆಧಾರದ ಮೇಲೆ ಆದ್ಯತಾ ಪಟ್ಟಿಯನ್ನು ತಯಾರಿಸಿ, ಈ ಕಛೇರಿಯ ಅನುಮೋದನೆ ಪಡೆದು ಆಸ್ತಿ-ಜವಾಬ್ದಾರಿಯನ್ನು ತ್ವರಿತವಾಗಿ ವಿಲೇವಾರಿ ಮಾಡಿ ಸಂಘದ ನೋಂದಣಿ ಕ್ರಮಾಂಕವನ್ನು ರದ್ದುಗೊಳಿಸಲು ಸೂಕ್ತ ಕ್ರಮ ಜರುಗಿಸುವುದು.

ಈ ಆದೇಶವನ್ನು ನನ್ನ ಹಸ್ತಾಕ್ಷರ ಮತ್ತು ಕಛೇರಿಯ ಮೊಹರ್ನಿಶೆಯೊಂದಿಗೆ ಈ ದಿನ, ದಿನಾಂಕ: 30.09.2004 ರಂದು ನೀಡಲಾಗಿದೆ.

**ಬಿ. ನಾಗರಾಜ**

ಪಿ.ಆರ್. 1430 ಸಹಕಾರ ಸಂಘಗಳ ಅಪರ ನಿಬಂಧಕರು (ಕೈಗಾರಿಕೆ ಮತ್ತು ಇತರೆ).

**ಪ್ರಾಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್ ರವರ ಕಾರ್ಯಾಲಯ, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ**

**ಸಂಖ್ಯೆ: ಇಎಕ್ಸ್‌ಇ/03/ಡಿಟಿಸಿಆರ್/110/2003-04, ದಿನಾಂಕ: 28ನೇ ಸೆಪ್ಟೆಂಬರ್ 2004**

**ಸಂಬಂಧಪಟ್ಟವರಿಗೆ**

ಅಕ್ರಮ ಮದ್ಯ ಸಾಗಾಣಿಕೆ ಆರೋಪದ ಮೇಲೆ ಟಾಟಾ ಲಾರಿ ನೋಂದಣಿ ಸಂಖ್ಯೆ: ಎಂಪಿ-09-ಕೆಬಿ-9082 ವಾಹನವು ದಿನಾಂಕ: 22.10.2003 ರಂದು ಈ ಪ್ರಾಧಿಕಾರದ ವ್ಯಾಪ್ತಿಯಲ್ಲಿ ಜಪ್ತಿಯಾಗಿರುತ್ತದೆ. ಈ ವಾಹನದ ವಾರಸುದಾರಿಕೆಯನ್ನು ಕ್ಲೈಮು ಮಾಡುವುದು ಇದ್ದಲ್ಲಿ ಈ ಪ್ರಕಟಣೆಯಾದ 15 ದಿನಗಳ ಒಳಗಾಗಿ ಈ ಪ್ರಾಧಿಕಾರದ ಮುಂದೆ ಸೂಕ್ತ ಅಹವಾಲನ್ನು ಸಲ್ಲಿಸುವುದು ತಪ್ಪಿದ್ದಲ್ಲಿ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕ್ರಮ ಜರುಗಿಸಲಾಗುವುದು.

**ಪಿ.ಎನ್. ಪಾಪಣ್ಣ**

ಪಿ.ಆರ್. 1431 ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ.

**IN THE COURT OF THE ADDITIONAL REGISTRAR OF CO-OPERATIVE SOCIETIES (CONSUMERS & MARKETING), BANGALORE-560052, OFFICE OF THE REGISTRAR OF CO-OPERATIVE SOCIETIES, NO.1, ALI ASKER ROAD, BANGALORE-560052**

**Dispute No A(C&M) D7:3908:2004-05**

| PETITIONER | | RESPONDENT |
|---|---|---|
| The Managing Director, Maland Areca Marketing Co-op Society Ltd., (MAMCOS) Post Box No.13, APMC Yard, Shimoga. | 1) | M/s K. Ashoka, Arecanut Merchants, S.B.M. Road, Sagara Rep by its Proprietor Sri K. Ashoka. |
| | 2) | Sri K. Ashoka S/o K.N. Govinda Bhatta, Proprietor M/s. K. Ashoka, Arecanut Merchants S.B.K.M. Road, Sagara. |
| | 3) | Sri K. Vinayaka S/o K.N. Govinda Bhatta Guarantor for first respondent. |

**NOTICE OF ATTACHMENT OF IMMOVABLE PROPERTIES UNDER SECTION 103 OF THE KARNATAKA CO-OPERATIVE SOCIETIES ACT, 1959**

1. Whereas, the Petitioner Society has filed the above dispute before me under Section 70 of The Karnataka Co-operative Societies Act, 1959 for recovery of a sum of Rs.64,65,738=00 [Rupees sixty four lakhs sixty five thousand seven hundreden thirtyeight only] along with further interest at 16% on the principal amount from 01/04/2004 till the date of realization from the Respondents. The dispute is taken on file under Dispute No. A(C&M)D7:3908:2004-05.

2. Whereas, it is brought to my notice by the Petitioner Society by an application filed under Section 103 of the Karnataka Co-operative Societies Act, 1959 that the Respondents are contemplating to convey or alienate or dispose the immovable properties belonging to the Respondents mentioned in the Schedule hereunder with the intent to delay the enforcement or execution of any award or order that may be passed in the above dispute against them.

3. Whereas, the Petitioner Society has further stated that if the respondents are not prevented from doing so, the Petitioner Society will be left with no means to recover the amount even if any award/decree is obtained against the respondents.

4. Whereas, I am fully convinced that the disposal of Schedule Property of the Respondents would defeat or delay the enforcement or execution of any order/decree that may be passed against the respondents.

5. Hence, I pass the following order.

**ORDER**

Under the Circumstances explained above and in exercise of powers vested in me under Section 103 of the Karnataka Co-operative Sicieties Act, 1959, as conferred by the Government Notification No. CMW/169/CLM/2001, dated: 21.11.2001, I, V. Channappa, Additional Registrar of Co-operative Societies (Consumer & Marketing), Bangalore, do here by order the conditional attachment of the immovable properties of the respondents as mentioned in the Schedule hereunder before Judgement in the above case.

Notice is hereby given to the respondents that if they desire to have the conditional attachment raise, they should furnish cash security to the extent of Rs.65,00,000 (Rupees Sixty five lakhs only) by depositing the said amount in the Petitioner Co-operative Society under Suspense Account and produce the original receipt/challan issued thereon to this office on or before 30/10/2004 without fail.

If they fail to furnish the cash security as ordered above within the stipulated period, this conditional attachment will be confirmed as made absolute.

Notice is also hereby given to the person purchasing or acquiring the properties mentioned in the Schedule hereunder that they will do so subject to this attachment.

**SCHEDULE OF PROPERTIES**

1. The below properties standing in the name of Sri K. Ashoka S/o K.N. Govinda Bhatta Proprietor of M/s K. Ashoka, Arecanut Merchants S.B.M. Road, Sagara, Shimoga District.

(i) 4.14 Acres Agricultural land (Bagayathu) Situated at in Survey No.33 of Dombe Village, Talaguppa Hobli, Sagara Taluk.

(ii) 12.00 Acres Agricultural land (Kushki) Situated at in Survey No.36 of Dombe Village, Talaguppa Hobli, Sagara Taluk.

2. 4.00 Acres of Agricultural land (Bagayathu) the property standing in the name of Sri K. Vinayaka S/o K.N. Govinda Bhatta Guarantor of First respondent. Situated at in Survey No.33 of Dombe Village, Talaguppa Hobli, Sagara Taluk.

Given under my hand and seal this the 24th day of September 2004.

P.R. 1432 Additional Registrar of Co-operative Societies (Consumer & Marketing)

**ಜಿಲ್ಲಾ ಅಧಿಕಾರಿಗಳ ಕಛೇರಿ, ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಇಲಾಖೆ,**
**ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು**

**ಪ್ರಕಟಣೆ ಸಂಖ್ಯೆ: ಹಿಂವಅಇ:ಬೆಂಗ್ರಾ:ಬಿ3:ಸಿಆರ್-4:2004-05, ದಿನಾಂಕ: 31ನೇ ಜುಲೈ 2004**

**ವಿಷಯ:** 2004-05ನೇ ಸಾಲಿನಲ್ಲಿ ಬೆಂಗಳೂರು (ಗ್ರಾ) ಜಿಲ್ಲೆಯಿಂದ ಹಿಂದುಳಿದ ವರ್ಗಗಳ ಕಾನೂನು ಪದವೀಧರರನ್ನು ನ್ಯಾಯಾಂಗ ಆಡಳಿತ ಹಾಗೂ ವಕೀಲ ವೃತ್ತಿಯ ತರಬೇತಿಗೆ ಅಭ್ಯರ್ಥಿಗಳನ್ನು ಆಯ್ಕೆ ಮಾಡುವ ಬಗ್ಗೆ ಅರ್ಜಿಗಳನ್ನು ಕರೆಯುವ ಬಗ್ಗೆ.

**ಉಲ್ಲೇಖ:** 1) ಸರ್ಕಾರದ ಆದೇಶ ಸಂಖ್ಯೆ: ಎಸ್‌ಡಬ್ಲ್ಯೂಎಲ್ 68 ಎಸ್ಇಡಬ್ಲ್ಯೂ 89, ದಿನಾಂಕ: 2.11.90.
2) ಸರ್ಕಾರದ ಆದೇಶ ಸಂಖ್ಯೆ: ಸಕಇ 205 ಬಿಎಂಎಸ್ 99, ದಿನಾಂಕ: 17.10.89.

**ಪ್ರಸ್ತಾವನೆ:**

2004-05ನೇ ಸಾಲಿನಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆಗೆ ಸೇರಿರುವ ಹಿಂದುಳಿದ ವರ್ಗದವರಾದ ಅಂದರೆ ವರ್ಗ 1, 2ಎ, 3ಎ, 3ಬಿ ವರ್ಗಗಳಿಗೆ ಸೇರಿದ ಕಾನೂನು ಪದವೀಧರರಿಂದ ನ್ಯಾಯಾಂಗ ಆಡಳಿತದಲ್ಲಿ ಹಾಗೂ ತರಬೇತಿ ಅವಧಿಯಲ್ಲಿ ತರಬೇತಿ ಭತ್ಯೆ ಮಂಜೂರಾತಿಗಾಗಿ ಅಭ್ಯರ್ಥಿಗಳನ್ನು ಆಯ್ಕೆ ಮಾಡಲು ಅರ್ಜಿಗಳನ್ನು ಆಹ್ವಾನಿಸಲಾಗಿದೆ.

ಹಿಂದುಳಿದ ವರ್ಗಗಳಿಗೆ ಸೇರಿದ ಈ ಕೆಳಕಂಡ ನಿಬಂಧನೆಗಳನ್ನು ಪಾಲಿಸಬಲ್ಲ ಕಾನೂನು ಪದವೀಧರ ಅಭ್ಯರ್ಥಿಗಳ ನಿಗದಿತ ಅರ್ಜಿ ನಮೂನೆಯನ್ನು ಈ ಕಛೇರಿಯಲ್ಲಿ ಪಡೆದು ಭರ್ತಿ ಮಾಡಲಾದ ಅರ್ಜಿಗಳನ್ನು ಸದಸ್ಯ ಕಾರ್ಯದರ್ಶಿಗಳು, ಕಾನೂನು ಪದವೀಧರರ ಆಯ್ಕೆ ಸಮಿತಿ ಹಾಗೂ ಜಿಲ್ಲಾ ಅಧಿಕಾರಿಗಳು, ಹಿಂದುಳಿದ ವರ್ಗಗಳ ಹಾಗೂ ಅಲ್ಪಸಂಖ್ಯಾತರ ಇಲಾಖೆ, ಬೆಂಗಳೂರು (ಗ್ರಾ) ಜಿಲ್ಲೆ, 1ನೇ ಮಹಡಿ, ಪೋಡಿಯಂ ಬ್ಲಾಕ್, ವಿಶ್ವೇಶ್ವರಯ್ಯ ಕೇಂದ್ರ, ಡಾ: ಅಂಬೇಡ್ಕರ್ ಬೀಧಿ, ಬೆಂಗಳೂರು ಇವರ ಕಛೇರಿಯಲ್ಲಿ ದಿನಾಂಕ: 28.8.2004 ರೊಳಗೆ ಸಲ್ಲಿಸುವುದು.

1) ಅಭ್ಯರ್ಥಿಯು ಕಾನೂನು ಪದವೀಧರರಾಗಿದ್ದು, ಈ ತರಬೇತಿಗೆ ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕಕ್ಕೆ ಅಭ್ಯರ್ಥಿಯು ಕಾನೂನು ಪದವಿ ಮುಗಿಸಿ 2 ವರ್ಷಗಳು ಮೀರಿರಬಾರದು.

2) ಅಭ್ಯರ್ಥಿಗಳು ಸರ್ಕಾರದ ಆದೇಶ ಸಂಖ್ಯೆ: ಎಸ್‌ಡಬ್ಲ್ಯೂಡಿ 150 ಬಿಸಿಎ 94, ದಿನಾಂಕ: 17ನೇ ಸೆಪ್ಟೆಂಬರ್ 94ರ ಆದೇಶದ ಅನುಸಾರ ಹಿಂದುಳಿದ ವರ್ಗ-1, 2ಎ, 3ಎ ಮತ್ತು 3ಬಿ ವರ್ಗೀಕರಣಕ್ಕೆ ಒಳಪಟ್ಟಿರಬೇಕು ಹಾಗೂ ಮೇಲ್ಕಂಡ ವರ್ಗಗಳಿಗೆ ನಿಗದಿಪಡಿಸಲಾದ ಜಾತಿ ಆದಾಯ ಪ್ರಮಾಣ ಪತ್ರಗಳಲ್ಲಿ ವಿವರಗಳನ್ನು ಭರ್ತಿಮಾಡಿ, ಭರ್ತಿ ಮಾಡಲಾದ ಅರ್ಜಿಯೊಂದಿಗೆ ಲಗತ್ತಿಸಿ ಸಲ್ಲಿಸಬೇಕು.

3) ಪ್ರವರ್ಗ-1ನ್ನು ಹೊರತುಪಡಿಸಿ ಇತರೆ ವರ್ಗಗಳಿಗೆ ಸೇರಿದ ಅಭ್ಯರ್ಥಿಗಳಿಗೆ ರೂ.15,000-00 ರೂ.ಗಳ ವಾರ್ಷಿಕ ಆದಾಯ ಮಿತಿಯನ್ನು ನಿಗದಿಪಡಿಸಲಾಗಿದೆ.

4) ಅಭ್ಯರ್ಥಿಗಳು ಬಾರ್ ಕೌನ್ಸಿಲ್‌ನಲ್ಲಿ ಹೆಸರನ್ನು ನೋಂದಾಯಿಸಿರಬೇಕು.

5) ಭರ್ತಿ ಮಾಡಲಾದ ಅರ್ಜಿಗಳನ್ನು ಸಲ್ಲಿಸಲು ನಿಗದಿಪಡಿಸಲಾದ ಕೊನೆಯ ದಿನಾಂಕಕ್ಕೆ ಅಭ್ಯರ್ಥಿಗಳ ವಯಸ್ಸು 30 ವರ್ಷಗಳು ಮೀರಿರಬಾರದು. ಆದರೆ ವರ್ಗ 1ರ ಅಭ್ಯರ್ಥಿಗಳಿಗೆ ಒಂದು ವರ್ಷದ ರಿಯಾಯ್ತಿ ಇದ್ದು, ಅವರುಗಳು 31 ವರ್ಷ ಮೀರಿರಬಾರದು.

6) ಅಭ್ಯರ್ಥಿಯ ಕೌಟುಂಬಿಕ ವಾರ್ಷಿಕ ವರಮಾನ ರೂ.15,000-00 ಗಳಿಗೆ ಮೀರಿರಬಾರದು. ಆದರೆ ವರ್ಗ-1 ರಲ್ಲಿ ಬರುವ ಮತೀಯ ಅಲ್ಪಸಂಖ್ಯಾತರ ಅಭ್ಯರ್ಥಿಗಳಿಗೆ ಆದಾಯ ಮಿತಿ ಇರುವುದಿಲ್ಲ. ಆಯ್ಕೆಯಾದ ಅಭ್ಯರ್ಥಿಗಳಿಗೆ 4 ವರ್ಷಗಳ ತರಬೇತಿ ಅವಧಿ ಇದ್ದು, ಈ ಮಧ್ಯದಲ್ಲಿ ತರಬೇತಿಯನ್ನು ಬಿಡಲು ಅವಕಾಶವಿರುವುದಿಲ್ಲ. ಆಯ್ಕೆಯಾದ ಅಭ್ಯರ್ಥಿಗಳಿಗೆ 4 ವರ್ಷಗಳ ತರಬೇತಿ ಅವಧಿ ಇದ್ದು, ಈ ಮಧ್ಯದಲ್ಲಿ ತರಬೇತಿಯನ್ನು ಬಿಡಲು ಅವಕಾಶವಿರುವುದಿಲ್ಲ. ಆದರೆ ಕೇಂದ್ರ ಸರ್ಕಾರ:ರಾಜ್ಯ ಸರ್ಕಾರದ ಕೆಲಸ ಸಿಕ್ಕಿದ ಅಭ್ಯರ್ಥಿಗಳಿಗೆ ಈ ಬಗ್ಗೆ ರಿಯಾಯಿತಿ ಇರುತ್ತದೆ.

7) ಆಯ್ಕೆಯಾದ ಅಭ್ಯರ್ಥಿಗಳಿಗೆ ತರಬೇತಿಯ ಅವಧಿಯಲ್ಲಿ ತಿಂಗಳಿಗೆ 1,000-00 ರೂ.ಗಳ ತರಬೇತಿ ಭತ್ಯೆಯನ್ನು ನೀಡಲಾಗುವುದು.

8) ಆಯ್ಕೆಯಾದ ಅಭ್ಯರ್ಥಿಗಳಿಗೆ ಜಿಲ್ಲಾ ಆಯ್ಕೆ ಸಮಿತಿಯು ಪಬ್ಲಿಕ್ ಪ್ರಾಸಿಕ್ಯೂಟರ್ಸ್, ಸರ್ಕಾರಿ ವಕೀಲರು ಅಥವಾ 20 ವರ್ಷಗಳಿಗಿಂತ ಹೆಚ್ಚಿನ ವರ್ಷಗಳು ವಕೀಲಿ ವೃತ್ತಿಯಲ್ಲಿ ಸೇವೆ ಸಲ್ಲಿಸುತ್ತಿರುವ ಹಿರಿಯ ವಕೀಲರಲ್ಲಿ ಕಾನೂನು ತರಬೇತಿ ಪಡೆಯುವ ಸಲುವಾಗಿ ತರಬೇತಿಗೆ ಕಳುಹಿಸಿಕೊಡಲಾಗುವುದು.

9) ಆಯ್ಕೆಯಾದ ಅಭ್ಯರ್ಥಿಯು ಈ ಇಲಾಖೆಯ ನಿಬಂಧನೆಗಳು ಹಾಗೂ ಸರ್ಕಾರದ ಆದೇಶಗಳಿಗೆ ಬದ್ಧನಾಗಿರುತ್ತೇನೆಂದು ಮುಚ್ಚಳಿಕೆಯನ್ನು ಬರೆದುಕೊಡಬೇಕು.

10) ಆಯ್ಕೆಯಾದ ಅಭ್ಯರ್ಥಿಯು ಸುಳ್ಳು ಮಾಹಿತಿ ನೀಡಿದ್ದಲ್ಲಿ ಅಥವಾ ತರಬೇತಿ ಅವಧಿಯ ಮಧ್ಯದಲ್ಲಿ ತರಬೇತಿಯಿಂದ ಬಿಟ್ಟು ಹೋದಲ್ಲಿ ಸರ್ಕಾರ ಅವರಿಗಾಗಿ ಖರ್ಚು ಮಾಡಿದ ಹಣವನ್ನು ವರ್ಷಕ್ಕೆ ಶೇ.10 ರಷ್ಟು ಬಡ್ಡಿಯೊಂದಿಗೆ ಭೂ ಕಂದಾಯ ಬಾಕಿ ಎಂದು ಪರಿಗಣಿಸಿ ವಸೂಲಿ ಮಾಡಲಾಗುವುದು.

11) ಹೆಚ್ಚಿನ ಮಾಹಿತಿಯನ್ನು ಅಭ್ಯರ್ಥಿಗಳು ಜಿಲ್ಲಾ ಅಧಿಕಾರಿಗಳು, ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಇಲಾಖೆ, ಬೆಂಗಳೂರು ಗ್ರಾಮಾಂತರ ಜಿಲ್ಲೆ, 1ನೇ ಮಹಡಿ, ಪೋಡಿಯಂ ಬ್ಲಾಕ್, ವಿಶ್ವೇಶ್ವರಯ್ಯ ಕೇಂದ್ರ, ಡಾ: ಅಂಬೇಡ್ಕರ್ ಬೀದಿ, ಬೆಂಗಳೂರು-1 ಇವರ ಕಛೇರಿಯ ವೇಳೆಯಲ್ಲಿ ಪಡೆಯಬಹುದು.

12) ಅರ್ಹ ಅಭ್ಯರ್ಥಿಗಳಿಗೆ ಆಯ್ಕೆ ಸಮಿತಿಯು ಸಂದರ್ಶನದ ದಿನಾಂಕ ಹಾಗೂ ಸ್ಥಳಗಳನ್ನು ತಿಳಿಸಿದಾಗ ಸಂದರ್ಶನಕ್ಕೆ ಅಭ್ಯರ್ಥಿಗಳು ತಮ್ಮ ಸ್ವಂತ ಖರ್ಚಿನಲ್ಲಿ ಹಾಜರಾಗತಕ್ಕದ್ದು.

13) ಅಭ್ಯರ್ಥಿಗಳು ಭರ್ತಿ ಮಾಡಲಾದ ಅರ್ಜಿಯೊಂದಿಗೆ ಅವಶ್ಯಕ ಮಾಹಿತಿಗಳಾದ ಕಾನೂನು ಪದವಿ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದ ಪ್ರಮಾಣ ಪತ್ರ ಹಾಗೂ ಅಂಕಪಟ್ಟಿಗಳ ದೃಢೀಕರಣ ಪ್ರತಿ ಹಾಗೂ ಜನ್ಮದಿನಾಂಕದ ಆಧಾರಕ್ಕಾಗಿ ಎಸ್.ಎಸ್.ಎಲ್.ಸಿ. ಅಂಕಪಟ್ಟಿ ಅಥವಾ ಟಿ.ಸಿ. ದೃಢೀಕೃತ ಪ್ರತಿಯನ್ನು ಲಗತ್ತಿಸಬೇಕು.

14) ಅಪೂರ್ಣ ಮಾಹಿತಿಗಳಿಂದ ಕೂಡಿದ ಅರ್ಜಿಗಳನ್ನು ಹಾಗೂ ನಿಗದಿತ ದಿನಾಂಕದ ನಂತರ ಸ್ವೀಕೃತಿಯಾದ ಅರ್ಜಿಗಳನ್ನು ತಿರಸ್ಕರಿಸಲಾಗುವುದು.

ಸದಸ್ಯ ಕಾರ್ಯದರ್ಶಿಗಳು ಹಾಗೂ ಜಿಲ್ಲಾ ಅಧಿಕಾರಿಗಳು, ಹಿಂದುಳಿದ ವರ್ಗಗಳ ಹಾಗೂ
ಪಿ.ಆರ್. 1433 ಅಲ್ಪಸಂಖ್ಯಾತರ ಇಲಾಖೆ, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ

**ಅಧಿಸೂಚನೆ ಸಂಖ್ಯೆ: ಸಿಆಸುಇ 426 ಸಿಶಾಸೇ 2004, ದಿನಾಂಕ: 24ನೇ ಸೆಪ್ಟೆಂಬರ್ 2004**

2005ನೇ ಸಾಲಿನಲ್ಲಿ, 58 ವರ್ಷ ವಯೋಮಿತಿಯು ಪೂರ್ಣಗೊಳ್ಳಲಿರುವ ಕರ್ನಾಟಕ ಸರ್ಕಾರ ಸಚಿವಾಲಯದ ಈ ಕೆಳಕಂಡ ಶಾಖಾಧಿಕಾರಿಗಳು ಅವರುಗಳ ಹೆಸರಿನ ಮುಂದೆ ಸೂಚಿಸಿರುವ ದಿನಾಂಕಗಳ ಅಪರಾಹ್ನದಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ನಿವೃತ್ತರಾಗಲಿರುವರು.

| ಕ್ರ. ಸಂ. | ಶಾಖಾಧಿಕಾರಿಯ ಹೆಸರು ಮತ್ತು ಕಾರ್ಯನಿರ್ವಹಿಸುತ್ತಿರುವ ಇಲಾಖೆ | ಜನ್ಮದಿನಾಂಕ | ನಿವೃತ್ತರಾಗಲಿರುವ ದಿನಾಂಕ |
|---|---|---|---|
| | **ಶ್ರೀ/ಶ್ರೀಮತಿ** | | |
| 1 | ಗಂಗಾಧರಯ್ಯ ಬಿ.ಆರ್.,<br>ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ರಾಜಕೀಯ) | 12.01.1947 | 31.01.2005 |
| 2 | ನಾಗರಾಜ್ ಸಿ.ಡಿ.,<br>ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ (ಪ್ರವಾಸೋದ್ಯಮ) | 16.01.1947 | 31.01.2005 |
| 3 | ನರಸಿಂಹಮೂರ್ತಿ ಕೆ., ಸಮಾಜ ಕಲ್ಯಾಣ ಇಲಾಖೆ (ಸಮಾಜ ಕಲ್ಯಾಣ-ಸಿ) | 04.05.1947 | 31.05.2005 |
| 4 | ಕೃಷ್ಣಮೂರ್ತಿ ಎ.ಎಸ್., ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ. | 20.05.1947 | 31.05.2005 |
| 5 | ನಾಗರಾಜ್ ಟಿ.ಎ., ಕೃಷಿ ಮತ್ತು ತೋಟಗಾರಿಕೆ ಇಲಾಖೆ (ಸ್ತ್ರೀಮರ) | 30.05.1947 | 31.05.2005 |
| 6 | ಸತ್ಯನಾರಾಯಣಮೂರ್ತಿ ಆರ್., ಒಳಾಡಳಿತ ಮತ್ತು ಸಾರಿಗೆ ಇಲಾಖೆ (ಸಮನ್ವಯ) | 21.06.1947 | 30.06.2005 |
| 7 | ರಾಮದಾಸ್ ನಾಯಕ್ ಎಸ್., ರಾಜ್ಯಪಾಲರ ಸಚಿವಾಲಯ, ರಾಜಭವನ. | 01.07.1947 | 30.06.2005 |
| 8 | ವಾಸುದೇವ ಬಿ., ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ (ಕಂಪನಿ ಮತ್ತು ನಿಗಮ) | 16.07.1947 | 31.07.2005 |
| 9 | ತಾರ್ಸಿಸ್ ರಾಜಾ ಸಿಂಗ್,<br>ಸಮಾಜ ಕಲ್ಯಾಣ ಇಲಾಖೆ (ಕಾರ್ಯದರ್ಶಿಗಳ ಆಪ್ತ ಶಾಖೆ) | 21.07.1947 | 31.07.2005 |
| 10 | ರುಕ್ಮಾಜಿ ರಾವ್ ಎಂ.ಎಸ್., ನಿಯೋಜನೆ ಮೇಲೆ ತಹಶೀಲ್ದಾರ್, ಬಾಗಲಕೋಟೆ. | 20.08.1947 | 31.08.2005 |
| 11 | ರಮೇಶ್ ಕೆ.ವಿ.,<br>ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ (ಪಶುಸಂಗೋಪನೆ-ಬಿ) | 01.09.1947 | 31.08.2005 |
| 12 | ಶಾಂತಮ್ಮ ಎ.,<br>ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಲೆಕ್ಕಪತ್ರ-ಐ.ಆರ್.ಎಲ್.ಎ.) | 13.10.1947 | 31.10.2005 |
| 13 | ತಾಯಮ್ಮ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ<br>(ವಿಶೇಷ ಆರ್ಥಿಕ ಯೋಜನೆ) | 08.11.1947 | 30.11.2005 |
| 14 | ರಂಗಸ್ವಾಮಿಗೌಡ ಎನ್.ಆರ್.,<br>ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಆಡಳಿತ ಸುಧಾರಣೆ-ಡಿ). | 10.11.1947 | 30.11.2005 |
| 15 | ವಿಜಯಲಕ್ಷ್ಮಿ ಎಸ್.ಎ.,<br>ಅರಣ್ಯ, ಪರಿಸರ ಮತ್ತು ಜೀವಶಾಸ್ತ್ರ ಇಲಾಖೆ ಐ.ಎಫ್.ಎ. (ಅಭಿಪ್ರಾಯ) | 15.11.1947 | 30.11.2005 |
| 16 | ಕೃಷ್ಣಮೂರ್ತಿ ಎಸ್., ಆರ್ಥಿಕ ಇಲಾಖೆ (ಪ್ರಧಾನ ಕಾರ್ಯದರ್ಶಿಗಳ ಆಪ್ತ ಶಾಖೆ). | 19.12.1947 | 31.12.2005 |

ಕರ್ನಾಟಕ ರಾಜ್ಯಪಾಲರ ಅಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ನಳಿನಿ**

ಪಿ.ಆರ್. 1434 ಸರ್ಕಾರದ ಅಧೀನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸಿಬ್ಬಂದಿ).

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿ, ನ್ಯಾಯಾಲಯ,**

**ಅರಣ್ಯ ಸಂಚಾರಿ ದಳ, ಶಿವಮೊಗ್ಗ ವೃತ್ತ, ಶಿವಮೊಗ್ಗ**

**ಸಂಖ್ಯೆ: ಅಸಂದ:ಶಿ:ಅಮೊ:72:93-94, ದಿನಾಂಕ: 28ನೇ ಸೆಪ್ಟೆಂಬರ್ 2004**

**ಉಪಸ್ಥಿತರು:** ಶ್ರೀ ಕೆ. ಲೋಕನಾಥಶೆಟ್ಟಿ, ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿದಳ, ಶಿವಮೊಗ್ಗ ವೃತ್ತ, ಶಿವಮೊಗ್ಗ.

**ಫಿರ್ಯಾದಿದಾರರು:** ವಲಯ ಅರಣ್ಯಾಧಿಕಾರಿ, ಅರಣ್ಯ ಸಂಚಾರಿ ದಳ, ಶಿವಮೊಗ್ಗ.

**ಮಾಲೀಕರು:** ಬಾಬು ನಯ್ಯಾಜ್ ಪಾಶ ಬಿನ್ ದಸ್ತಗಿರ್ ಖಾನ್, ನಂ.15, 2ನೇ ಕ್ರಾಸ್, ಬಿ ಸ್ಟ್ರೀಟ್, ಜಿ.ಜೆ.ಆರ್. ನಗರ, ಬೆಂಗಳೂರು ಇವರಿಂದ ವಿಶೇಷ ಅಧಿಕಾರ ಪತ್ರ ಹೊಂದಿದ ಶ್ರೀ ಪಿ. ಮುಜಕೀರ್ ಬಿನ್ ಪ್ಯಾರಾಸಾಬ್, ಕೆ.ಜಿ. ಮೊಹಲ್ಲ, ಕೋಲಾರ. ಪರವಾಗಿ ಜಿ. ಮಧು, ವಕೀಲರು, ಶಿವಮೊಗ್ಗ.

**ಪ್ರಕರಣದ ಹಿನ್ನೆಲೆ:**

ದಿನಾಂಕ: 18.09.93 ರಂದು ಮೆಟಡೊರ್ ವ್ಯಾನ್ ನೋಂದಣಿ ಸಂಖ್ಯೆ: ಕೆಎ:01:3113 ರಲ್ಲಿ ಒಟ್ಟು 258 ಕೆ.ಜಿ. ತೂಕದ ಶ್ರೀಗಂಧವನ್ನು ಯಾರೋ ಆಸಾಮಿಗಳು ಯಾವುದೇ ತರಹದ ರಹದಾರಿ ಇಲ್ಲದೇ ಅಕ್ರಮವಾಗಿ ಹೊನ್ನಾಳಿ ರಸ್ತೆಯಲ್ಲಿರುವ ಬೆನಕನಹಳ್ಳಿ ಕೈಮರ ಹುಣಸೇಹಳ್ಳಿ ಕ್ರಾಸ್ ಬಳಿ ಸಾಗಿಸುತ್ತಿದ್ದಾಗ ಅರಣ್ಯ ಸಂಚಾರಿ ದಳ, ಶಿವಮೊಗ್ಗದ ವಲಯ ಅರಣ್ಯಾಧಿಕಾರಿ ಹಾಗೂ ಸಿಬ್ಬಂದಿಯವರು ಪತ್ತೆ ಹಚ್ಚಿ ವಾಹನ ಹಾಗೂ ಶ್ರೀಗಂಧವನ್ನು ಸರ್ಕಾರದ ಪರ ವಶಪಡಿಸಿಕೊಂಡು ಪಂಚನಾಮೆ ಕ್ರಮ ಜರುಗಿಸಿ ವಾಹನ ಹಾಗೂ ಶ್ರೀಗಂಧದ ಬಗ್ಗೆ ಅರಣ್ಯ ಮೊಕದ್ದಮೆ ಸಂಖ್ಯೆ: 72:93-94ನ್ನು ದಾಖಲು ಮಾಡಿಕೊಂಡು ವಾಹನ ಮೆಟಡೊರ್ ವ್ಯಾನಿನ ಇಂಜಿನ್ ನಂ. ಮತ್ತು ಛಾಸ್ಸಿ ನಂಬರ್‌ಗಳು ಕಂಡು ಬರುತ್ತಿಲ್ಲವೆಂದು ತಿಳಿಸುತ್ತಾ, ಈ ಪ್ರಕರಣಕ್ಕೆ ಸಂಬಂಧಪಟ್ಟಂತೆ ಆಸಾಮಿಗಳು ಪತ್ತೆಯಾಗಿರುವುದಿಲ್ಲವೆಂದು ತಿಳಿಸುತ್ತಾ, ಸಂಬಂಧಪಟ್ಟ ದಾಖಲಾತಿಗಳೊಂದಿಗೆ ವಾಹನ ಮತ್ತು ಶ್ರೀಗಂಧವನ್ನು 1963ನೇ ಕರ್ನಾಟಕ ಅರಣ್ಯ ಕಾಯ್ದೆ ಸೆಕ್ಷನ್ 71-ಎ ಪ್ರಕಾರ ಮುಂದಿನ ಕ್ರಮ ಕೈಗೊಳ್ಳುವಂತೆ ವಲಯ ಅರಣ್ಯಾಧಿಕಾರಿಗಳು ಈ ಪ್ರಾಧಿಕಾರಕ್ಕೆ ಹಾಜರ್‌ಪಡಿಸಿರುತ್ತಾರೆ. ಅದರಂತೆ ವಾಹನ ಮತ್ತು ಶ್ರೀಗಂಧವನ್ನು ವಲಯ ಅರಣ್ಯಾಧಿಕಾರಿ, ಅರಣ್ಯ ಸಂಚಾರಿ ದಳ, ಶಿವಮೊಗ್ಗ ರವರ ಸುಪರ್ದಿಗೆ ಸುರಕ್ಷತೆಗಾಗಿ ಮುಂದಿನ ಆದೇಶವಾಗುವವರೆವಿಗೂ ಇಟ್ಟುಕೊಳ್ಳಲು ಆದೇಶಿಸಲಾಗಿತ್ತು.

ಅನಂತರ ಹಿಂದಿನ ಅಧಿಕಾರಿಗಳು ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 71-ಎ ಕುರಿತು 30 ದಿನಗಳ ಕಾಲಾವಕಾಶವನ್ನು ನೀಡಿ ವಾಹನ ಮಾಲೀಕರು : ವಾರಸುದಾರರು ಯಾರಾದರೂ ಇದ್ದರೆ ವಾಹನಕ್ಕೆ ಸಂಬಂಧಪಟ್ಟಂತೆ ಮೂಲ ದಾಖಲಾತಿಗಳೊಂದಿಗೆ ಹಕ್ಕು ಬಾಧ್ಯತೆಯನ್ನು ಈ ನ್ಯಾಯಾಲಯದ ಮುಂದೆ ಹಾಜರಾಗಿ ತಮ್ಮ ಮಾಲಿಕತ್ವವನ್ನು ರುಜುವಾತು ಪಡಿಸುವುದು. ತಪ್ಪಿದಲ್ಲಿ ವಾಹನ ಮತ್ತು ಶ್ರೀಗಂಧವನ್ನು 1963ರ ಕರ್ನಾಟಕ ಅರಣ್ಯ ಕಾಯ್ದೆ ಸೆಕ್ಷನ್ 71ಎ ಕುರಿತು ಮುಂದಿನ ಕ್ರಮ ಕೈಗೊಳ್ಳಲಾಗುವುದು ಎಂಬ ಪ್ರಕಟಣೆಯನ್ನು ದಿನಾಂಕ: 5.10.93ರ ಉದಯವಾಣಿ ಕನ್ನಡ ದಿನಪತ್ರಿಕೆಯಲ್ಲಿ ಹಾಗೂ ಜನವರಿ 20 1994ರ ಭಾಗ 3ರ ಪುಟ ಸಂಖ್ಯೆ: 23ರ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಚಾರ ಪಡಿಸಿ ಪ್ರಕಟಿಸಲಾಗಿದೆ.

ಅನಂತರ ವಾಹನ ಮಾಲೀಕರ ಹೆಸರು ವಿಳಾಸವನ್ನು ಕೋರಿ ಪ್ರಾದೇಶಿಕ ಸಾರಿಗೆ ಅಧಿಕಾರಿಗಳವರಲ್ಲಿ ಪತ್ರವ್ಯವಹರಿಸಿ ವಾಹನದ ಬಿ ವರದಿಯನ್ನು ಪಡೆಯಲಾಗಿರುತ್ತದೆ.

ಈ ಮಧ್ಯೆ ಬಾಬು ನಯ್ಯಾಜ್ ಪಾಶ ರವರು ವಾಹನದ ಮಾಲೀಕರಾಗಿದ್ದು ಮಾಲೀಕರಿಂದ ವಿಶೇಷ ಅಧಿಕಾರಿ ಪತ್ರ ಹೊಂದಿದ ಪಿ. ಮುಜಕೀರ್ ರವರು ವಕೀಲರ ಮುಖಾಂತರ ಈ ಪ್ರಾಧಿಕಾರಕ್ಕೆ ಅರ್ಜಿ ಸಲ್ಲಿಸಿ ಕೆಎ:01:3113 ವಾಹನವನ್ನು ಮಧ್ಯಂತರ ಬಿಡುಗಡೆ ಮಾಡುವಂತೆ ದಿನಾಂಕ: 27.09.93ರ ಅರ್ಜಿಯಲ್ಲಿ ಕೋರಿರುತ್ತಾರೆ. ಸದರಿ ಅರ್ಜಿಯ ಮೇರೆಗೆ ಈ ಪ್ರಾಧಿಕಾರದಿಂದ ವಾಹನ ಮಾಲೀಕರಾದ ಶ್ರೀ ಬಾಬು ನಯ್ಯಾಜ್ ಪಾಶ ರವರಿಗೆ ಕಾರಣ ಕೇಳುವ ಪತ್ರವನ್ನು ಜಾರಿ ಮಾಡಿದ್ದು, ಸದರಿ ನೋಟೀಸ್‌ಗೆ ವಾಹನ ಮಾಲೀಕರು ಈ ಪ್ರಾಧಿಕಾರಕ್ಕೆ ದಿನಾಂಕ: 2.11.93 ರಂದು ಉತ್ತರವನ್ನು ಸಲ್ಲಿಸಿರುತ್ತಾರೆ. ಈ ಸಂಬಂಧ ಹಿಂದಿನ ಅಧಿಕಾರಿಗಳು ಸಹಾಯಕ ಅಭಿಯೋಗ ನಿರ್ದೇಶಕರ ಆಕ್ಷೇಪಣೆಯನ್ನು ಪಡೆದು ಸಂಬಂಧಪಟ್ಟ ದಾಖಲಾತಿಗಳನ್ನು ಪರಿಶೀಲಿಸಿ ವಾಹನವನ್ನು ಮಾಲೀಕರು ಮಧ್ಯಂತರ ಬಿಡುಗಡೆ ಕೇಳಿದ ದಿನಾಂಕ: 27.09.93ರ ಅರ್ಜಿಯನ್ನು ತಿರಸ್ಕರಿಸಿ ದಿನಾಂಕ: 27.12.93 ರಂದು ಆದೇಶ ಹೊರಡಿಸಿರುತ್ತಾರೆ. ಸದರಿ ಆದೇಶದ ವಿರುದ್ಧ ವಾಹನ ಮಾಲೀಕರು ಶಿವಮೊಗ್ಗ ಸೆಷನ್ಸ್ ನ್ಯಾಯಾಲಯಕ್ಕೆ ಮೇಲ್ಮನವಿ ಸಲ್ಲಿಸಿದ್ದು ಅದು ಕ್ರಿಮಿನಲ್ ಮಿಸ್ ಅಪೀಲ್ ನಂ.58:93 ಆಗಿರುತ್ತದೆ. ಮಾನ್ಯ ಸೆಷನ್ಸ್ ನ್ಯಾಯಾಲಯವು ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ವಾಹನವನ್ನು ಮಧ್ಯಂತರ ಬಿಡುಗಡೆ ಮಾಡುವಂತೆ ಕೆಲವು ನಿಬಂಧನೆಗೊಳಪಟ್ಟು ದಿನಾಂಕ: 27.01.94 ರಂದು ಆದೇಶ ಹೊರಡಿಸಿರುತ್ತಾರೆ. ಸದರಿ ಆದೇಶದನ್ವಯ ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ವಾಹನವನ್ನು ವಾಹನ ಮಾಲೀಕರಿಂದ ವಿಶೇಷ ಅಧಿಕಾರಿ ಪತ್ರ ಹೊಂದಿದ ಪಿ. ಮುಜಕೀರ್ ಇವರಿಗೆ ದಿನಾಂಕ: 12.09.94 ರಂದು ವಾಹನ ಮಧ್ಯಂತರ ಬಿಡುಗಡೆ ಮಾಡಲಾಗಿರುತ್ತದೆ.

ಅನಂತರ ಈ ಪ್ರಾಧಿಕಾರದಲ್ಲಿ ಪ್ರಕರಣದ ವಿಚಾರಣೆಯ ಸಮಯದಲ್ಲಿ ಅಭಿಯೋಜನಾ ಪರ ಎರಡು ಸಾಕ್ಷಿಯನ್ನು ವಿಚಾರಣೆ ಮಾಡಲಾಗಿರುತ್ತದೆ. ಅನಂತರ ಮುಂದಿನ ವಿಚಾರಣೆಯ ಬಗ್ಗೆ ವಿಚಾರಣಾ ದಿನಾಂಕಗಳನ್ನು ನಿಗದಿಪಡಿಸಿ ಅರ್ಜಿದಾರರ ಪರ ವಕೀಲರಿಗೆ ತಿಳಿಸಿದಾಗ್ಯೂ ಕೂಡ ವಿಚಾರಣೆಗೆ ಹಾಜರಾಗಿ, ಸಹಕರಿಸಿರುವುದಿಲ್ಲ. ಅಲ್ಲದೇ ವಾಹನ ಮಾಲೀಕರು ಹಾಜರಾಗದೇ ವಾಹನವನ್ನು ಸಹ ಹಾಜರ್‌ಪಡಿಸಿರುವುದಿಲ್ಲ. ನಿಗದಿ ಪಡಿಸಿದ ವಿಚಾರಣಾ ದಿನಾಂಕಗಳು ಈ ಕೆಳಗಿನಂತಿವೆ. ದಿನಾಂಕ: 21.10.94, 23.12.94, 13.01.95, 03.02.95, 24.02.95, 17.03.95, 31.03.95, 24.08.95, 22.09.95, 22.03.96 ಮತ್ತು 19.04.96.

ಮೇಲ್ಕಂಡಂತೆ ಅರ್ಜಿದಾರರಿಗೆ ಹಾಗೂ ಅವರ ಪರ ವಕೀಲರಿಗೆ ಸಾಕಷ್ಟು ಕಾಲಾವಕಾಶವನ್ನು ನೀಡಿದಾಗಲೂ ಸಹ ವಿಚಾರಣೆಗೆ ಸಹಕರಿಸದೇ ನಿರ್ಲಕ್ಷತನ ತೋರಿರುತ್ತಾರೆ. ಆದ್ದರಿಂದ ಹಿಂದಿನ ಅಧಿಕಾರಿಗಳು ಈ ಪ್ರಕರಣದಲ್ಲಿ ಅರ್ಜಿದಾರರು ವಾಹನ ಮಧ್ಯಂತರ

ಬಿಡುಗಡೆ ಸಮಯದಲ್ಲಿ ಠೇವಣಿ ಇಟ್ಟ ರೂ.30,000-00 ಹಣವನ್ನು ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಂಡು ದಿನಾಂಕ: 27.09.96 ರಂದು ಆದೇಶ ಹೊರಡಿಸಲಾಗಿರುತ್ತದೆ.

ಈ ಮಧ್ಯೆ ಈ ಪ್ರಕರಣದಲ್ಲಿ ಅಭಿಯೋಜನಾಪರ ಸಾಕ್ಷಿಗಳನ್ನು ಸಹಾಯಕ ಅಭಿಯೋಗ ನಿರ್ದೇಶಕರು ವಿಚಾರಿಸಿಕೊಂಡು ನಿಶಾನೆಗಳನ್ನು ಗುರುತಿಸಿರುತ್ತಾರೆ. ಸಂಬಂಧಪಟ್ಟ ಸಾಕ್ಷ್ಯಾಧಾರದಿಂದ ದಿನಾಂಕ: 18.09.93 ರಂದು ವಾಹನ ಸಂಖ್ಯೆ: ಕೆಎ:01:3113 ರಲ್ಲಿ ಅಕ್ರಮವಾಗಿ ಶ್ರೀಗಂಧ ಕಳ್ಳ ಸಾಗಾಣಿಕೆ ಮಾಡಿರುವುದು ಸ್ಪಷ್ಟಪಡುತ್ತದೆ.

ಅರ್ಜಿದಾರರ ಪರ ವಕೀಲರು ಹಾಗೂ ಅರ್ಜಿದಾರರಿಗೆ ಸಾಕಷ್ಟು ಕಾಲಾವಕಾಶವನ್ನು ನೀಡಿದಾಗ್ಯೂ ಕೂಡ ಮೇಲ್ಕಂಡ ಯಾವುದೇ ದಿವಸದ ವಿಚಾರಣೆಗೆ ಹಾಜರಾಗಿ ಸಹಕರಿಸಿರುವುದಿಲ್ಲ. ಇದರಿಂದ ಪ್ರಕರಣದ ಬಗ್ಗೆ ಅರ್ಜಿದಾರರಿಗೆ ಯಾವುದೇ ಆಸಕ್ತಿಯು ಇಲ್ಲವೆಂದು ಭಾವಿಸಲಾಗಿರುತ್ತದೆ. ಅರಣ್ಯ ಕಾಯ್ದೆ ಸೆಕ್ಷನ್ 71ಎ ಪ್ರಕರಣದಲ್ಲಿ ಯಾವುದೇ ವಾಹನವು ಶ್ರೀಗಂಧ ಕಳ್ಳ ಸಾಗಾಣಿಕೆಯಲ್ಲಿ ತೊಡಗಿದೆ ಎಂದು ಮೇಲ್ನೋಟಕ್ಕೆ ಅಭಿಯೋಜನೆ ಸಿದ್ದಪಡಿಸಿದ ಮೆಲೆ ವಾಹನ ಮಾಲೀಕರು ತನ್ನ ತಿಳುವಳಿಕೆ ಇಲ್ಲದೇ ಅಥವಾ ತನ್ನ ಕೈಮೀರಿ ತಾನು ಎಲ್ಲಾ ಕಾಳಜಿ ವಹಿಸಿದ ನಂತರವೂ ಇಂತಹ ಅಪರಾಧದಲ್ಲಿ ಸಿಕ್ಕಿಹಾಕಿಕೊಂಡಿದೆ ಎಂದು ನಿಸ್ಸಂಶಯವಾಗಿ ಸಿದ್ದಪಡಿಸುವ ಸಂಪೂರ್ಣ ಭಾರ ಮಾಲಿಕರ ಮೇಲಿದ್ದು, ಮಾಲೀಕರಾಗಲೀ ಅಥವಾ ವಾಹನವನ್ನು ಸ್ವಾಧೀನ ಹೊಂದಿದವರಾಗಲೀ ವಾಹನವನ್ನು ಅಕ್ರಮ ಚಟುವಟಿಕೆಗಳಿಗೆ ತಮ್ಮ ತಿಳುವಳಿಕೆಗೆ ಬಾರದೇ ಉಪಯೋಗಿಸಲ್ಪಟ್ಟಿದೆ ಮತ್ತು ಈ ಅಕ್ರಮ ಚಟುವಟಿಕೆಗೆ ವಾಹನವನ್ನು ಉಪಯೋಗಿಸದಂತೆ ಅವಶ್ಯವಿರುವ ಎಲ್ಲಾ ಮುನ್ನೆಚ್ಚರಿಕೆಯನ್ನು ತೆಗೆದುಕೊಂಡಿರುವುದನ್ನು ಸಾಕ್ಷ್ಯಾಧಾರದೊಂದಿಗೆ ಸಾಬೀತು ಪಡಿಸಬೇಕಾಗಿದ್ದು, ವಾಹನ ಮಾಲೀಕರು ಈ ನಿಟ್ಟಿನಲ್ಲಿ ಸಂಪೂರ್ಣ ವಿಫಲರಾಗಿರುತ್ತಾರೆ.

ಅಲ್ಲದೇ ಇದು ಬಹಳ ಹಳೇ ಪ್ರಕರಣವಾದ್ದರಿಂದ ಇನ್ನು ಮುಂದುವರಿಸಿದರೆ ಅರ್ಥಹೀನ ಹಾಗೂ ಅನಾವಶ್ಯಕ ಕಾಲ ಹರಣವೆಂದು ತೀರ್ಮಾನಿಸಿಕೊಂಡು ಅಭಿಯೋಜನಾ ಪರ ಸಾಕ್ಷ್ಯಾಧಾರವನ್ನು ಗಣನೆಗೆ ತೆಗೆದುಕೊಂಡು ದಿನಾಂಕ: 18.09.93 ರಂದು ಕೆಎ:01:3113 ವಾಹನದಲ್ಲಿ ಅಕ್ರಮವಾಗಿ ಶ್ರೀಗಂಧವನ್ನು ಕಾನೂನು ಬಾಹಿರವಾಗಿ ಸಾಗಾಣಿಕೆ ಮಾಡುತ್ತಿರುವುದು ಸಂಬಂಧಪಟ್ಟ ದಾಖಲಾತಿಯಿಂದ ದೃಢಪಟ್ಟಿರುವುದರಿಂದ ಸದರಿ ವಾಹನವನ್ನು ಮುಟ್ಟುಗೋಲು ಹಾಕಿಕೊಳ್ಳುವುದು ಸಮಂಜಸವೆಂದು ಕಂಡು ಬಂದಿರುವುದರಿಂದ ಈ ಆದೇಶ.

**ಆದೇಶ**

ಮೇಲ್ಕಂಡ ವಿದ್ಯಾಮಾನಗಳ ಅನುಸಾರವಾಗಿ ಅಧಿಕಾರಿಯುತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಶಿವಮೊಗ್ಗ ಆದ ನಾನು ಕೆ. ಲೋಕನಾಥಶೆಟ್ಟಿ, ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 71-ಎ ಪ್ರಕಾರ ಪ್ರದತ್ತವಾದ ಅಧಿಕಾರದಂತೆ ಪ್ರಕರಣದಲ್ಲಿ ವಶಪಡಿಸಿಕೊಂಡ ವಾಹನ ಮೆಟಡೋರ್ ವ್ಯಾನ್ ನೋಂದಣಿ ಸಂಖ್ಯೆ: ಕೆಎ:01:3113 ಇಂಜಿನ್ ಸಂಖ್ಯೆ ಮತ್ತು ಛಾಸ್ಸಿ ಸಂಖ್ಯೆ ಕಂಡುಬಂದಿರುವುದಿಲ್ಲ ಮತ್ತು 258 ಕೆಜಿ ತೂಕದ ಶ್ರೀಗಂಧವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು, ವಾಹನ ಮತ್ತು ಅದರ ಬಿಡಿಭಾಗಗಳನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇವಾರಿ ಮಾಡುವಂತೆ ಆದೇಶಿಸಿದ್ದೇನೆ. ಸದರಿ ವಾಹನ ಮತ್ತು ಶ್ರೀಗಂಧ ಎಲ್ಲಾ ಋಣಭಾರಗಳಿಂದ ವಿಮುಕ್ತವಾಗಿರುತ್ತದೆ.

ಈ ಆದೇಶವು ಈ ದಿನ ಅಂದರೆ ದಿನಾಂಕ: 20.09.2004 ರಿಂದ ಸಂಪೂರ್ಣ ಜಾರಿಗೆ ಬರುತ್ತದೆ. ಆದೇಶ ಹೊರಡಿಸಿದ ದಿನಾಂಕದಿಂದ 30 ದಿವಸದೊಳಗೆ ವಾಹನದ ಬಾಧ್ಯತೆದಾರರು ಮೇಲ್ಮನವಿ ಸಲ್ಲಿಸಿ ತಡೆಯಾಜ್ಞೆ ತರದೇ ಇದ್ದರೆ ಇದೇ ಅಂತಿಮ ಆದೇಶವಾಗಿ ಊರ್ಜಿತಗೊಳ್ಳುತ್ತದೆ.

ಈ ಆದೇಶವನ್ನು ಇಂದು ಅಂದರೆ ದಿನಾಂಕ: 20.09.04 ರಂದು ಉಕ್ತಲೇಖನ ಕೊಟ್ಟು ಬೆರಳಚ್ಚಿಸಿ ನಂತರ ತಪ್ಪುಗಳನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಿ, ಅನಂತರ ಈ ನ್ಯಾಯಾಲಯದ ಮೊಹರು ಹಾಕಿ ನನ್ನ ಸಹಿಯೊಂದಿಗೆ ಹೊರಡಿಸಿರುತ್ತೇನೆ.-

**ಕೆ. ಲೋಕನಾಥಶೆಟ್ಟಿ**

ಪಿ.ಆರ್. 1435

ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಅರಣ್ಯ ಸಂಚಾರಿ ದಳ, ಶಿವಮೊಗ್ಗ ವೃತ್ತ, ಶಿವಮೊಗ್ಗ.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ದಕ್ಷಿಣ ಕನ್ನಡ ಜಿಲ್ಲೆ,**
**ಬೆಂದೂರ್‌ವೆಲ್‌ವೃತ್ತ, ಮಂಗಳೂರು-2 ಇವರ ನ್ಯಾಯಾಲಯದಲ್ಲಿ**
**ಸಂಖ್ಯೆ: ಡಬ್ಲ್ಯೂಸಿಎ:ಸಿಆರ್-37:2004:ಎಫ್, ದಿನಾಂಕ: 30ನೇ ಸೆಪ್ಟೆಂಬರ್ 2004**

**ಅರ್ಜಿದಾರರು** — **ವಿರುದ್ಧ** — **ಪ್ರತಿವಾದಿಗಳು**

ಅರ್ಜಿದಾರರು:
1) ಶ್ರೀ ಜಾರಪ್ಪ ಪೂಜಾರಿ ಬಿನ್ ತ್ಯಾಂಪ ಪೂಜಾರಿ
2) ಶ್ರೀಮತಿ ಸುಂದರಿ ಕೋಂ ಜಾರಪ್ಪ ಪೂಜಾರಿ
3) ಕುಮಾರಿ ವಿಶಾಲ ಬಿನ್ ಜಾರಪ್ಪ ಪೂಜಾರಿ
ಮೂಡು ಜಪ್ಪುಹೌಸ್, ಉಳ್ಳಾಬೆಟ್ಟು ಅಂಚೆ,
ಮಂಗಳೂರು ತಾ:

ಪ್ರತಿವಾದಿಗಳು:
1) ಶ್ರೀ ಐತಪ್ಪ ಪೂಜಾರಿ ಬಿನ್ ಕಾಂತಪ್ಪ ಪೂಜಾರಿ,
ಅಮೃತ ನಗರ, ವಾಮಂಜೂರು, ಮಂಗಳೂರು ದಕ್ಷಿಣ ಕನ್ನಡ.
2) ಬ್ರಾಂಚ್ ಮ್ಯಾನೇಜರ್, ಯುನೈಟೆಡ್ ಇಂಡಿಯಾ ಇನ್ಶೂರೆನ್ಸ್
ಬ್ರಾಂಚ್ ಆಫೀಸು, ಸಲ್ಡಾನಾ ಬಿಲ್ಡಿಂಗ್ ಬ್ರಿಡ್ಜ್ ರಸ್ತೆ, ಬಲ್ಮಠ,
ಮಂಗಳೂರು.

**ಅಧಿಸೂಚನೆ**

ಅರ್ಜಿದಾರನಾದ ಶ್ರೀ ಜಾರಪ್ಪ ಪೂಜಾರಿ ಇವರು ತಮ್ಮ ಮಗನಾದ ಅಶೋಕ ಪೂಜಾರಿ ಇವರು 1ನೇ ಪ್ರತಿವಾದಿಗಳಾದ ಶ್ರೀ ಐತಪ್ಪ ಪೂಜಾರಿ ಇವರಲ್ಲಿ ಕೆಲಸಗಾರರಾಗಿದ್ದು, ಕೆಲಸದಲ್ಲಿ ನಿರತರಾಗಿದ್ದಾಗ, ದಿನಾಂಕ: 15.5.2004 ರಂದು ಅಪಘಾತಕ್ಕೀಡಾಗಿ

ಮೃತರಾದರೆಂದು ಹೇಳಿ ಆಶ್ರಿತರಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಿ ಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಾಗಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದಲ್ಲಿ ಮತ್ತು ಈ ಅರ್ಜಿಗೆ ಸಂಬಂಧಿಸಿ, ಇನ್ನಿತರ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆ ಸರ್ಕಾರಿ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದಲ್ಲಿನಿಂದ 30 ದಿನಗಳೊಳಗೆ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಮು ಅರ್ಜಿ:ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸಲಾಗುವುದೆಂದು ತಿಳಿಸಲಾಗಿದೆ.

ಪಿ.ಆರ್. 1437 ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ದ.ಕ ಜಿಲ್ಲೆ, ಮಂಗಳೂರು.

**ಕಾರ್ಮಿಕ ನಷ್ಟ ಪರಿಹಾರಕ್ಕೆ ಆಯುಕ್ತರು ಮತ್ತು ಕಾರ್ಮಿಕ ಅಧಿಕಾರಿ, ದಕ್ಷಿಣ ಕನ್ನಡ ಉಪವಿಭಾಗ, ಬೆಂದೂರ್‌ವೆಲ್, ಮಂಗಳೂರು ಇವರ ನ್ಯಾಯಾಲಯದಲ್ಲಿ**

**ಸಂಖ್ಯೆ: ಡಬ್ಲ್ಯೂಸಿಎಂ:36:2004:ಎಫ್, ದಿನಾಂಕ: 30ನೇ ಸೆಪ್ಟೆಂಬರ್ 2004**

| ಅರ್ಜಿದಾರರು | ವಿರುದ್ಧ | ಪ್ರತಿವಾದಿಗಳು |
|---|---|---|
| 1) ಶ್ರೀ ಕಾಮಪ್ಪ ಪೈ ಬಡಕನ್ನವರ್ ಬಿನ್ ಎಲ್ಲಪ್ಪ ಹುನಗುಂದ ತಾಲ್ಲೂಕು, ಕಂಪಾಲ ಕಲ್ಲಪುರ ಅಂಚೆ, ಕಮಟಗಿ, ಬಾಗಲಕೋಟೆ. | | 1) ಶ್ರೀ ಅಲಿಫ್ ಬಾವ, ಪಾರ್ಟನರ್ ಮೆ: ಎಚ್‌ಕೆಎ ಬಾವ ಅಂಡ್ ಸನ್ಸ್, ಮುಕ್ಕ, ಸುರತ್ಕಲ್, ಮಂಗಳೂರು. |
| 2) ಶ್ರೀಮತಿ ಲಕ್ಷ್ಮೀಬ್ಯಾ ಶ್ರೀ ಕಾಮಪ್ಪ ಪೈ ಬಡಕನ್ನವರ್, ಹುನಗುಂದ, ಬಾಗಲಕೋಟೆ. | | |

**ಅಧಿಸೂಚನೆ**

ಅರ್ಜಿದಾರನಾದ ಶ್ರೀ ಕಾಮಪ್ಪ ಪೈ ಬಡಕನ್ನವರ್ ಇವರು ತಮ್ಮ ಮಗನಾದ ಎಲ್ಲಪ್ಪ ಕಾಮಪ್ಪ ಇವರು 1ನೇ ಪ್ರತಿವಾದಿಗಳಾದ ಮೆ: ಅರೀಫ್‌ಬಾವ ಮುಕ್ಕ ಸುರತ್ಕಲ್ ದಕ್ಷಿಣ ಕನ್ನಡ ಇವರಲ್ಲಿ ಕೆಲಸಗಾರರಾಗಿದ್ದು, ಕೆಲಸದಲ್ಲಿ ನಿರತರಾಗಿದ್ದಾಗ, ದಿನಾಂಕ: 31.8.2004 ರಂದು ಅಪಘಾತಕ್ಕೀಡಾಗಿ ಮೃತರಾದರೆಂದು ಹೇಳಿ ಆಶ್ರಿತರಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಿ ಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಾಗಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದಲ್ಲಿ ಮತ್ತು ಈ ಅರ್ಜಿಗೆ ಸಂಬಂಧಿಸಿ, ಇನ್ನಿತರ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆ ಸರ್ಕಾರಿ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದಲ್ಲಿನಿಂದ 30 ದಿನಗಳೊಳಗೆ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಮು ಅರ್ಜಿ:ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸಲಾಗುವುದೆಂದು ತಿಳಿಸಲಾಗಿದೆ.

ಕಾರ್ಮಿಕ ನಷ್ಟ ಪರಿಹಾರಕ್ಕೆ ಆಯುಕ್ತರು ಮತ್ತು ಕಾರ್ಮಿಕ ಅಧಿಕಾರಿ,
ಪಿ.ಆರ್. 1438 ದ.ಕ ಉಪವಿಭಾಗ, ಮಂಗಳೂರು.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ದಾವಣಗೆರೆ ಜಿಲ್ಲೆ, ದಾವಣಗೆರೆ**

**ಪ್ರ. ಸಂಖ್ಯೆ: ಕಾಅದಾ:ಸಿಆರ್-267:2004, ದಿನಾಂಕ: 8ನೇ ಅಕ್ಟೋಬರ್ 2004**

| ಅರ್ಜಿದಾರರು | ಪ್ರತಿವಾದಿಗಳು |
|---|---|
| 1) ಶ್ರೀಮತಿ ಗಂಗಮ್ಮ ಕೋಂ ವಿರೂಪಾಕ್ಷಪ್ಪ ಅಂಗಡಿ, ನಿಟ್ಟೂರು ರಾಣೆಬೆನ್ನೂರು ತಾಲ್ಲೂಕು. | 1) ಎನ್.ಜಿ. ಬಸವನಗೌಡ ಬಿನ್ ನೀಲಪ್ಪ, ಟ್ರ್ಯಾಕ್ಟರ್ ಮಾಲೀಕರು, ನಂ.ಕೆಎ-17/ಟಿ2529 30, ಶಿರೇಗೇರಿ, ಹರಿಹರ ತಾಲ್ಲೂಕು. |
| | 2) ದಿ ಬ್ರಾಂಚ್ ಮ್ಯಾನೇಜರ್, ಓರಿಯಂಟಲ್ ಇನ್ಶೂರೆನ್ಸ್ ಕಂ. ಲಿ., ಪಿ.ಬಿ. ರಸ್ತೆ, ದಾವಣಗೆರೆ. |

**ಪ್ರಕಟಣೆ**

ಶ್ರೀಮತಿ ಗಂಗವ್ವ ಇವರುಗಳಾದ ತಾವು ಮೃತ ರಾಜಪ್ಪ ವಿರೂಪಾಕ್ಷಪ್ಪ ಅಂಗಡಿ ಇವರ ತಾಯಿ ಎಂದೂ ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ರಾಜಪ್ಪ ವಿರೂಪಾಕ್ಷಪ್ಪ ಅಂಗಡಿ ರವರು ಒಂದನೇ ಪ್ರತಿವಾದಿಗಳಾದ ಎನ್. ಬಸವನಗೌಡ ಇವರ ಟ್ರ್ಯಾಕ್ಟರ್ ಟ್ರೈಲರ್ ರಲ್ಲಿ ಕೂಲಿ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದೂ, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು, ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಸಿ.ಹೆಚ್. ಹಿರೇಗೌಡರ್**

ಪಿ.ಆರ್. 1439 ಕಾರ್ಮಿಕ ಅಧಿಕಾರಿ ಮತ್ತು ಆಯುಕ್ತರು ಕಾರ್ಮಿಕ ನಷ್ಟ ಪರಿಹಾರ, ದಾವಣಗೆರೆ ಜಿಲ್ಲೆ, ದಾವಣಗೆರೆ.

**ಕಾರ್ಮಿಕ ನಷ್ಟ ಪರಿಹಾರಕ್ಕೆ ಆಯುಕ್ತರು ಮತ್ತು ಕಾರ್ಮಿಕ ಅಧಿಕಾರಿ, ದಕ್ಷಿಣ ಕನ್ನಡ ಉಪವಿಭಾಗ-I, ಬೆಂದೂರ್‌ವೆಲ್, ಮಂಗಳೂರು ಇವರ ನ್ಯಾಯಾಲಯದಲ್ಲಿ**

**ಸಂಖ್ಯೆ: ಡಬ್ಲ್ಯೂಸಿಎ:ಸಿಆರ್-39:2004:ಎಫ್, ದಿನಾಂಕ: 6ನೇ ಅಕ್ಟೋಬರ್ 2004**

**ಅರ್ಜಿದಾರರು**

1) ಶ್ರೀಮತಿ ಕಮಲ ಕೋಂ ಸೇಸಪ್ಪ ನ್ಯಾಕ್, ಅಂಗಡಿಗುಡ್ಡೆ, ಉರ್ವ ಸ್ಟೋರ್ಸ್, ಮಂಗಳೂರು-575006.
2) ಶ್ರೀಮತಿ ಲಲಿತ ಕೋಂ ದಿ: ಈಶ್ವರ, ನೆಲ್ಯಾಡಿಕೆ ಹೌಸ್, ಕಡಂದಲೆ, ಮಂಗಳೂರು ತಾಲ್ಲೂಕು, ದ.ಕ.
3) ಕುಮಾರಿ ಸಹಾನಾ ಬಿನ್ ದಿ: ಈಶ್ವರ್ ಕಡಂದಲೆ, ಮಂಗಳೂರು ತಾ:

**ಪ್ರತಿವಾದಿಗಳು**

1) ಶ್ರೀ ಆರೀಫ್ ಬಾವ ಪಾರ್ಟನರ್ ಮೆ: ಎಚ್‌ಕೆಎ ಬಾವ ಎಂಡ್ ಸನ್ಸ್ ಮುಕ್ಕ, ಸುರತ್ಕಲ್, ಮಂಗಳೂರು.

**ಅಧಿಸೂಚನೆ**

ಅರ್ಜಿದಾರಳಾದ ಶ್ರೀಮತಿ ಕಮಲ ಇವರು ತಮ್ಮ ಮಗನಾದ ಈಶ್ವರ ಉರುಫ್ ಬಾಬು ಇವರು ಪ್ರತಿವಾದಿಗಳಾದ ಮೆ: ಆರೀಫ್‌ಬಾವ ಪಾಲುದಾರರು ಇವರಲ್ಲಿ ಕೆಲಸಗಾರರಾಗಿದ್ದು, ಕೆಲಸದಲ್ಲಿ ನಿರತರಾಗಿದ್ದಾಗ, ದಿನಾಂಕ: 31.8.2004 ರಂದು ಅಪಘಾತಕ್ಕೀಡಾಗಿ ಮೃತರಾದರೆಂದು ಹೇಳಿ ಆಶ್ರಿತರಾದ ತಮಗೆ ಪ್ರತಿವಾದಿಯವರಿಂದ ಪರಿಹಾರವನ್ನು ಕೊಡಿಸಿ ಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಾಗಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದಲ್ಲಿ ಮತ್ತು ಈ ಅರ್ಜಿಗೆ ಸಂಬಂಧಿಸಿ, ಇನ್ನಿತರ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆ ಸರ್ಕಾರಿ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದಲ್ಲಿನಿಂದ 30 ದಿನಗಳೊಳಗೆ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಮು ಅರ್ಜಿ:ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮವನ್ನು ಜರುಗಿಸಲಾಗುವುದೆಂದು ತಿಳಿಸಲಾಗಿದೆ.

ಕಾರ್ಮಿಕ ನಷ್ಟ ಪರಿಹಾರಕ್ಕೆ ಆಯುಕ್ತರು ಮತ್ತು ಕಾರ್ಮಿಕ ಅಧಿಕಾರಿ,
ದ.ಕ ಉಪವಿಭಾಗ-I, ಮಂಗಳೂರು.

ಪಿ.ಆರ್. 1440

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ದಾವಣಗೆರೆ ಜಿಲ್ಲೆ, ದಾವಣಗೆರೆ**

**ಪ್ರ. ಸಂಖ್ಯೆ: ಕಾಅದಾ:ಕಾನಪ:ಸಿಆರ್-278:2004, ದಿನಾಂಕ: 6ನೇ ಅಕ್ಟೋಬರ್ 2004**

**ಅರ್ಜಿದಾರರು**

1) ಮರಿಯಾ ಲೂಹಿಸ್ ಕೋಂ ಲೇ: ವಿನ್ಸಂಟ್ ಪೌಲ್‌ರಾಜ್.
2) ಕುಮಾರಿ ರೋಸ್ ಪೌಲಿನ್ ಬಿನ್ ಲೇ: ವಿನ್ಸೆಂಟ್ ಪೌಲ್‌ರಾಜ್.
3) ಕುಮಾರಿ ಹೆಲಿನ್, (4) ಯೇಸುದಾಸ್, ವಾಸ: ನಂ.94ಎ ಗೋವಿಂದ ಗೊಂಡೂರ್ ತೋಟಮ್ ವಿರಮನೂರ್, ಸೇಲಂ, ತಮಿಳುನಾಡು.

**ಪ್ರತಿವಾದಿಗಳು**

1) ಎಸ್.ಕೆ. ರಾಜ ಬಿನ್ ಮಿ: ಕುಮಾರ್, ಲಾರಿ ಮಾಲೀಕರು, ನಂ.ಕೆಎಂ 1/ಎ.ಸಿ. 8789, ವಾಸ: ನಂ.107, 4ನೇ ಕ್ರಾಸ್, ಕಲಾಸೀಪಾಳ್ಯಂ ಹೊಸಬಡಾವಣೆ, ಬೆಂಗಳೂರು 2.
2) ದಿ ಡಿವಿಜನಲ್ ಮ್ಯಾನೇಜರ್, ನ್ಯಾಷನಲ್ ಇನ್ಶೂರೆನ್ಸ್ ಕಂ. ಲಿ., ಬಿನ್ನಿ ಕಂಪನಿ ರೋಡ್, ದಾವಣಗೆರೆ.

**ಪ್ರಕಟಣೆ**

ಶ್ರೀಮತಿ ಮೇರಿ ಲೂಯಿಸ್, ಕು: ರೋಸ್ ಪೌಲಿನ್, ಕು: ಹೆಲಿನ್ ಮೇರಿ, ಯೇಸುದಾಸ್ ಇವರುಗಳಾದ ತಾವು ಮೃತ ವಿನ್ಸಂಟ್ ಪೌಲ್‌ರಾಜ್ ಇವರ ಹೆಂಡತಿ ಮತ್ತು ಮಕ್ಕಳು ಎಂದೂ ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ವಿನ್ಸಂಟ್ ಪೌಲ್‌ರಾಜ್ ರವರು ಒಂದನೇ ಪ್ರತಿವಾದಿಗಳಾದ ಎಸ್.ಕೆ. ರಾಜ ಇವರ ಲಾರಿಯಲ್ಲಿ ಕ್ಲೀನರ್ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದೂ, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು, ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಸಿ.ಹೆಚ್. ಹಿರೇಗೌಡರ್**

ಪಿ.ಆರ್. 1441 ಕಾರ್ಮಿಕ ಅಧಿಕಾರಿ ಮತ್ತು ಆಯುಕ್ತರು ಕಾರ್ಮಿಕ ನಷ್ಟ ಪರಿಹಾರ, ದಾವಣಗೆರೆ ಜಿಲ್ಲೆ, ದಾವಣಗೆರೆ.

**ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ, ಚಿತ್ರದುರ್ಗ ಉಪವಿಭಾಗ, ಚಿತ್ರದುರ್ಗ ಇವರ ನಡವಳಿಕೆಗಳು**

**ಸಂಖ್ಯೆ: ಸನಿ30/ಎಬಿಎನ್/ಸಿಆರ್/17/2004-05, ದಿನಾಂಕ: 5ನೇ ಅಕ್ಟೋಬರ್ 2004**

**ವಿಷಯ:** ಶ್ರೀ ಕೆ. ರಾಮಲಿಂಗಪ್ಪ, ಮಾನಂಗಿ ಗ್ರಾಮದ ವಾಸಿ ಇವರ ಕಾಟಿಹಳ್ಳಿ ಗ್ರಾಮಕ್ಕೆ ಸೇರಿರುವ ಸ್ಥಿರಾಸ್ತಿಯನ್ನು ಚಿತ್ರದುರ್ಗ ತಾಲ್ಲೂಕು ಇವರ ವ್ಯ.ಸೇ.ಸ. ಬ್ಯಾಂಕ್ (ನಿ) ಭೀಮಸಮುದ್ರ ಇದರಲ್ಲಿ ದುರುಪಯೋಗ ಮಾಡಿದ್ದು ಸದರಿ ಸ್ಥಿರಾಸ್ತಿಯನ್ನು ವ್ಯ.ಸೇ.ಸ. ಬ್ಯಾಂಕ್ (ನಿ) ಭೀಮಸಮುದ್ರ ಇವರ ಹೆಸರಿಗೆ ವರ್ಗಾವಣೆ ಮಾಡುವ ಕುರಿತು.

**ಉಲ್ಲೇಖ** 1) ಅಮಲ್ಜಾರಿ ಸಂಖ್ಯೆ: 305/2004-05.
2) ಮಾರಾಟಾಧಿಕಾರಿಗಳು ಸ.ಸಂ.ಸ. ನಿಬಂಧಕರ ಕಛೇರಿ ಇವರ ಪ್ರಸ್ತಾವನೆ ಸಂಖ್ಯೆ ಮ.ಆ.ಚಿ./ಇ.ಪಿ./ಆಸ್ತಿ/ ವರ್ಗಾವಣೆ/2004-05, ದಿನಾಂಕ: 01.09.2004.
3) ಈ ಕಛೇರಿಯ ನೋಟೀಸ್ ದಿನಾಂಕ: 13.09.2004.

**ಪ್ರಸ್ತಾವನೆ:**

ಶ್ರೀ ಕೆ. ರಾಮಲಿಂಗಪ್ಪ, ಮಾನಂಗಿ ಗ್ರಾಮದ ವಾಸಿ ಇರುವ ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ (ನಿ), ಭೀಮಸಮುದ್ರ ಚಿತ್ರದುರ್ಗ ತಾಲ್ಲೂಕು ಇದರಲ್ಲಿ ದುರುಪಯೋಗ ಮಾಡಿದ ಬಾಬ್ತು ರೂ.14,63,306.00 ಗಳನ್ನು ಮರುಪಾವತಿ ಮಾಡದೇ ಇರುವ ಪ್ರಯುಕ್ತ ಅವರುಗಳ ವಿರುದ್ಧ ಬ್ಯಾಂಕಿನವರು ದಾವಾ ಕ್ರಮ ಪಡೆದಿರುತ್ತಾರೆ. ಆದಾಗ್ಯೂ ಸಹ ಸದರಿಯವರು ದುರುಪಯೋಗದ ಹಣವನ್ನು ಪಾವತಿ ಮಾಡದೇ ಇರುವ ಪ್ರಯುಕ್ತ ಅಮಲ್ಜಾರಿ ಅರ್ಜಿ ಪಡೆದು ಈ ಕೆಳಗೆ ನಮೂದಿಸಿರುವ ಷೆಡ್ಯೂಲ್ ಸ್ಥಿರಾಸ್ತಿಗಳನ್ನು ದಿನಾಂಕ: 25.08.2004 ರಂದು ಬಹಿರಂಗ ಹರಾಜಿಗೆ ತಂದಿರುತ್ತಾರೆ. ಆದಾಗ್ಯೂ ಸದರಿಯವರು ಬ್ಯಾಂಕಿಗೆ ದುರುಪಯೋಗದ ಹಣವನ್ನು ಪಾವತಿ ಮಾಡಿರುವುದಿಲ್ಲ. ಆದುದರಿಂದ ಸದರಿ ದಿನಾಂಕದಂದು ಹರಾಜು ನಡೆಸಲಾಗಿ ಹರಾಜಿನಲ್ಲಿ ಯಾವ ಬಿಡ್ಡುದಾರರು ಭಾಗವಹಿಸದೇ ಇದ್ದ ಪ್ರಯುಕ್ತ ಅವರುಗಳ ಸ್ಥಿರಾಸ್ತಿಯನ್ನು ಬ್ಯಾಂಕಿನ ಹೆಸರಿಗೆ ನಿಲ್ಲಿಸಿ ಸದರಿಯವರ ಸ್ಥಿರಾಸ್ತಿಯನ್ನು ಕಾಯ್ದೆ ಕಲಂ 101(ಬಿ) ಅನ್ವಯ ಬ್ಯಾಂಕಿನ ಹೆಸರಿಗೆ ವರ್ಗಾವಣೆ ಮಾಡಲು ಆದೇಶ ನೀಡುವಂತೆ ಮಾರಾಟಾಧಿಕಾರಿಗಳು ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಈ ಬಗ್ಗೆ ಈ ಕಛೇರಿಯಿಂದ ದಿನಾಂಕ: 13.09.2004 ರಂದು ನೋಟೀಸ್ ನೀಡಿದಾಗ್ಯೂ ದುರುಪಯೋಗದ ಹಣವನ್ನು ಬ್ಯಾಂಕಿಗೆ ಜಮಾ ಮಾಡಿರುವುದಿಲ್ಲ. ಆದರಿಂದ ಅವರಿಗೆ ಸಂಬಂಧಪಟ್ಟ ಸ್ಥಿರಾಸ್ತಿಯನ್ನು ಅಂದರೆ ಕಾಟೀಹಳ್ಳಿ ಗ್ರಾಮ ಖಾತೆ ನಂ.135/ ರಿ.ಸ.ನಂ.25/ಪಿ2, 2 ಎಕರೆ ಖುಷ್ಕಿ, ಚಕ್ಕುಬಂದಿ ಪೂರ್ವಕ್ಕೆ : ಪರಮೇಶ್ವರಪ್ಪ ಬಿನ್ ಮುರಿಗೆಪ್ಪ, ಪಶ್ಚಿಮಕ್ಕೆ: ಬಸವರಾಜಪ್ಪ ಬಿನ್ ದಾನಪ್ಪ, ರಿ.ಸ.ನಂ.25/ಪಿ-3, ಉತ್ತರಕ್ಕೆ: ದಾನಪ್ಪ ಬಿನ್ ತೊಟ್ಟಿಬಸಪ್ಪ, ರಿ.ಸ.ನಂ.25/1ಪಿ, ದಕ್ಷಿಣಕ್ಕೆ ಮಾನಂಗಿ ಗಡಿ ಇದನ್ನು ಬ್ಯಾಂಕಿನ ಹೆಸರಿಗೆ ವರ್ಗಾವಣೆ ಮಾಡಿ ಈ ಕೆಳಕಂಡಂತೆ ಆದೇಶ ನೀಡಲಾಗಿದೆ.

**ಆದೇಶ ಸಂಖ್ಯೆ: ಸನಿ.30/ಎಬಿಎನ್ ಕಲಂ/101(ಬಿ) ವ್ಯ.ಸೇ.ಸ.ಬ್ಯಾಂಕ್(ನಿ) ಭೀಮಸಮುದ್ರ:2004-05,**
**ದಿನಾಂಕ: 5ನೇ ಅಕ್ಟೋಬರ್ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಶ್ರೀ ಬಿ.ಟಿ. ಜಯರಾಮಪ್ಪ, ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿತ್ರದುರ್ಗ ಉಪ ವಿಭಾಗ ಆದ ನಾನು ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 101(ಬಿ) ಮತ್ತು ನಿಯಮ 1960ರ ನಿಯಮ 38ಎ ನಲ್ಲಿ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಕೆ. ರಾಮಲಿಂಗಪ್ಪ, ಮಾನಂಗಿ ಗ್ರಾಮ ವಾಸಿ ಇವರ ಕಾಟೀಹಳ್ಳಿ ಗ್ರಾಮಕ್ಕೆ ಸೇರಿರುವ ಈ ಕೆಳಗೆ ತೋರಿಸಿರುವ ಷೆಡ್ಯೂಲ್ಡ್ ಸ್ಥಿರಾಸ್ತಿಯನ್ನು ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ (ನಿ) ಭೀಮಸಮುದ್ರ ಇವರ ಹೆಸರಿಗೆ ವರ್ಗಾವಣೆ ಮಾಡಿ ಆದೇಶ ನೀಡಲಾಗಿದೆ.

ಪೂರ್ವಕ್ಕೆ: ಪರಮೇಶ್ವರಪ್ಪ ಬಿನ್ ಮುರಿಗೆಪ್ಪ, ರಿ.ಸ.ನಂ.24/ಪಿ-2
ಪಶ್ಚಿಮಕ್ಕೆ: ಬಸವರಾಜಪ್ಪ ಬಿನ್ ದಾನಪ್ಪ, ರಿ.ಸ.ನಂ.25/ಪಿ-3
ಉತ್ತರಕ್ಕೆ: ದಾನಪ್ಪ ಬಿನ್ ತೊಟ್ಟಿಬಸಪ್ಪ, ರಿ.ಸ.ನಂ.25/ಪಿ-3
ದಕ್ಷಿಣಕ್ಕೆ: ಮಾನಂಗಿ ಗಡಿ.

ಈ ಆದೇಶವನ್ನು ನನ್ನ ಸ್ವ ಹಸ್ತ ಸಹಿ ಹಾಗೂ ಕಛೇರಿಯ ಮುದ್ರೆಯೊಂದಿಗೆ ದಿನಾಂಕ: 5.10.2004 ರಂದು ನೀಡಲಾಗಿದೆ.

ಪಿ.ಆರ್. 1445 ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿತ್ರದುರ್ಗ ಉಪವಿಭಾಗ, ಚಿತ್ರದುರ್ಗ.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯದಲ್ಲಿ, ಕೋಲಾರ**
**ಪ್ರಕರಣ ಸಂಖ್ಯೆ: ಡಬ್ಲ್ಯೂಸಿಎ:ಎಫ್‌ಸಿ-29:2004**

| ಅರ್ಜಿದಾರರು | ವಿರುದ್ಧ | ಪ್ರತಿವಾದಿಗಳು |
|---|---|---|
| 1) ಶ್ರೀಮತಿ ರೆಡ್ಡಮ್ಮ 25 ವರ್ಷ ಕೋಂ ಲೇಟ್ ಬಿ. ಸೋಮಶೇಖರ್ | | 1) ಶ್ರೀ ಮಲ್ಲಿಕಾರ್ಜುನ್ ಬಿನ್ ಎಂ. ನರಸಿಂಹಯ್ಯ, ಎಸ್.ಆರ್. ಎಕ್ಸ್‌ಟೆನ್‌ಷನ್, ಚಿಂತಾಮಣಿ, ಕೋಲಾರ ಜಿಲ್ಲೆ. |
| 2) ಕಲ್ಯಾಣ, 6 ವರ್ಷ, ಬಿನ್ ಲೇಟ್ ಬಿ. ಸೋಮಶೇಖರ್ | | |
| 3) ಉಪೇಂದ್ರ, 2 ವರ್ಷ ಬಿನ್ ಲೇಟ್ ಬಿ. ಸೋಮಶೇಖರ್ ದೇವಪಲ್ಲಿ ವಿಲೇಜ್, ಎಂ. ಗೊಲ್ಲಹಳ್ಳಿ ಅಂಚೆ, ಚಿಂತಾಮಣಿ ತಾಲ್ಲೂಕು, ಕೋಲಾರ ಜಿಲ್ಲೆ. | | 2) ದಿ ಯುನೈಟೆಡ್ ಇಂಡಿಯಾ ಇನ್ಸೂರೆನ್ಸ್ ಕಂ. ಲಿ., ಎಸ್.ಬಿ.ಎಲ್.ಟಿ. ಬಿಲ್ಡಿಂಗ್, ಪಾಲಿಟೆಕ್ನಿಕ್ ರಸ್ತೆ, ಚಿಂತಾಮಣಿ, ಕೋಲಾರ ಜಿಲ್ಲೆ. |

**ಅಧಿಸೂಚನೆ**

ಅರ್ಜಿದಾರರಾದ ಶ್ರೀಮತಿ ರೆಡ್ಡಮ್ಮ ಕೋಂ ಲೇಟ್ ಬಿ. ಸೋಮಶೇಖರ್ ಅವರು ತಮ್ಮ ಗಂಡ ಶ್ರೀ ಬಿ. ಸೋಮಶೇಖರ್ ಅವರು 1ನೇ ಪ್ರತಿವಾದಿ ಶ್ರೀ ಮಲ್ಲಿಕಾರ್ಜುನ್ ಬಿನ್ ಎಂ. ನರಸಿಂಹಯ್ಯರವರ ಬಳಿ ಚಾಲಕ ಆಗಿದ್ದು, ಕರ್ತವ್ಯ ನಿರತನಾಗಿದ್ದಾಗ ದಿನಾಂಕ: 31.05.2004 ರಂದು ಅಪಘಾತಕ್ಕೀಡಾಗಿ ಮರಣ ಹೊಂದಿರುತ್ತಾರೆಂದು ತಿಳಿಸಿ ಮೃತನ ಅವಲಂಬಿತರಾದ ಅವರಿಗೆ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಿದ್ದು ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದರೆ ಮತ್ತು ಈ ಅರ್ಜಿಗೆ ಸಂಬಂಧಿಸಿ ಇನ್ನಿತರೆ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆ ಕರ್ನಾಟಕ ರಾಜ್ಯ

ಪತ್ರದಲ್ಲಿ ಪ್ರಕಟಣೆಯಾದ ದಿನದಿಂದ 30 ದಿನಗಳ ಒಳಗಾಗಿ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಂ ಅರ್ಜಿ:ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮ ಜರುಗಿಸುತ್ತದೆಂದು ತಿಳಿಸಲಾಗಿದೆ.

ಈ ಅಧಿಸೂಚನೆಯನ್ನು ನನ್ನ ಹಸ್ತಾಕ್ಷರ ಮತ್ತು ಈ ನ್ಯಾಯಾಲಯದ ಮೊಹರಿನೊಂದಿಗೆ ಇದೇ ದಿನಾಂಕ: 30.09.2004 ರಂದು ನೀಡಲಾಗಿದೆ.

**ಜಿ. ಚಿಕ್ಕಣ್ಣ**

ಪಿ.ಆರ್. 1442 ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಕೋಲಾರ ಜಿಲ್ಲೆ, ಕೋಲಾರ.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯದಲ್ಲಿ, ಕೋಲಾರ**

**ಪ್ರಕರಣ ಸಂಖ್ಯೆ: ಡಬ್ಲ್ಯೂಸಿಎ:ಎಫ್‌ಸಿ-30:2004**

| ಅರ್ಜಿದಾರರು | ವಿರುದ್ಧ | ಪ್ರತಿವಾದಿಗಳು |
|---|---|---|
| 1) ವೆಂಕಟರವಣಮ್ಮ, ಕೋಂ ಲೇಟ್ ಆದಿನಾರಾಯಣಪ್ಪ, 37 ವರ್ಷ | | 1) ಗಂಗರತ್ನಮ್ಮ, ನಂ.139, 10ನೇ ಬ್ಲಾಕ್, ಬಂಗಾರಪೇಟೆ, ಕೋಲಾರ ಜಿಲ್ಲೆ. |
| 2) ಎ. ಅಂಜೀನಪ್ಪ, ಬಿನ್ ಲೇಟ್ ಆದಿನಾರಾಯಣಪ್ಪ, 19 ವರ್ಷ, ತಾಟನಗಾರಿನಪಲ್ಲಿ, ತಿಮ್ಮಮಪಲ್ಲಿ ಅಂಚೆ, ಗೋಳೂರು ಹೋಬಳಿ, ಬಾಗೇಪಲ್ಲಿ ತಾಲ್ಲೂಕು, ಕೋಲಾರ ಜಿಲ್ಲೆ. | | 2) ಇಫ್‌ಕೋ ಟೋಕಿಯೋ ಜನರಲ್ ಇನ್ಸೂರೆನ್ಸ್ ಕಂಪನಿ ಲಿ., ಎಸ್.ಬಿ.ಯು. ಗರಗಾನ್ ಎಫ್.ಬಿ.ಐ. ಬಿಲ್ಡಿಂಗ್, ನಂ.10, ಶಾಹೀದ್ ಜೀತ್‌ಸಿಂಗ್ ಮಾರ್ಗ ಕುತುಬ್ ಇನ್‌ಸ್ಟಿಟ್ಯೂಷನಲ್ ಏರಿಯಾ, ನ್ಯೂ ಡೆಲ್ಲಿ - 110 047. |

**ಅಧಿಸೂಚನೆ**

ಅರ್ಜಿದಾರರಾದ ವೆಂಕಟರವಣಮ್ಮ ಕೋಂ ಲೇಟ್ ಆದಿನಾರಾಯಣಪ್ಪ ಅವರು ತಮ್ಮ ಗಂಡ ಆದಿನಾರಾಯಣಪ್ಪ ಬಿನ್ ಲೇಟ್ ದಾಸಣ್ಣ ಅವರು 1ನೇ ಪ್ರತಿವಾದಿ ಶ್ರೀಮತಿ ಗಂಗರತ್ನಮ್ಮ ರವರ ಬಳಿ ಕೂಲಿ ಆಗಿದ್ದು, ಕರ್ತವ್ಯ ನಿರತನಾಗಿದ್ದಾಗ ದಿನಾಂಕ: 23.04.2004 ರಂದು ಅಪಘಾತಕ್ಕೀಡಾಗಿ ಮರಣ ಹೊಂದಿರುತ್ತಾರೆಂದು ತಿಳಿಸಿ ಮೃತನ ಅವಲಂಬಿತರಾದ ಅವರಿಗೆ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಿದ್ದು ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದರೆ ಮತ್ತು ಈ ಅರ್ಜಿಗೆ ಸಂಬಂಧಿಸಿ ಇನ್ನಿತರೆ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದ ದಿನದಿಂದ 30 ದಿನಗಳ ಒಳಗಾಗಿ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಂ ಅರ್ಜಿ:ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮ ಜರುಗಿಸುತ್ತದೆಂದು ತಿಳಿಸಲಾಗಿದೆ.

ಈ ಅಧಿಸೂಚನೆಯನ್ನು ನನ್ನ ಹಸ್ತಾಕ್ಷರ ಮತ್ತು ಈ ನ್ಯಾಯಾಲಯದ ಮೊಹರಿನೊಂದಿಗೆ ಇದೇ ದಿನಾಂಕ: 30.09.2004 ರಂದು ನೀಡಲಾಗಿದೆ.

**ಜಿ. ಚಿಕ್ಕಣ್ಣ**

ಪಿ.ಆರ್. 1443 ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಕೋಲಾರ ಜಿಲ್ಲೆ, ಕೋಲಾರ.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯದಲ್ಲಿ, ಕೋಲಾರ**

**ಪ್ರಕರಣ ಸಂಖ್ಯೆ: ಡಬ್ಲ್ಯೂಸಿಎ:ಎಫ್‌ಸಿ-31:2004**

| ಅರ್ಜಿದಾರರು | ವಿರುದ್ಧ | ಪ್ರತಿವಾದಿಗಳು |
|---|---|---|
| 1) ಶ್ರೀ ತಿಮ್ಮರಾಯಪ್ಪ, ಬಿನ್ ಲೇಟ್ ಮೋಟಪ್ಪ, 50 ವರ್ಷ, ಜೋಡಿಪುರ ವಿಲೇಜ್, ಬುವನಹಳ್ಳಿ ಅಂಚೆ, ಮಾಲೂರು ತಾಲ್ಲೂಕು, ಕೋಲಾರ ಜಿಲ್ಲೆ. | | 1) ಶ್ರೀ ಸೊನ್ನೇಗೌಡ ಬಿನ್ ಗೋಪಾಲಪ್ಪ, ಯಲವಾರ್ ವಿಲೇಜ್, ಕಾಮದೇನಹಳ್ಳಿ ಅಂಚೆ, ಕೋಲಾರ ತಾ: |
| | | 2) ಶ್ರೀ ಸಿ. ಬೈರೇಗೌಡ ಬಿನ್ ಚಿಕ್ಕಮುನಿಯಪ್ಪ, ಕರಿನಾಯ್ಕನ ಹಳ್ಳಿ ವಿಲೇಜ್, ಬುವನಹಳ್ಳಿ ಅಂಚೆ, ಮಾಲೂರು ತಾಲ್ಲೂಕು, ಕೋಲಾರ ಜಿಲ್ಲೆ. |
| | | 3) ಮೆ: ದಿ ನ್ಯೂ ಇಂಡಿಯಾ ಅಶ್ಯೂರೆನ್ಸ್ ಕಂಪನಿ ಲಿ., ಶಾಖಾ ಕಛೇರಿ, ಬಾಗಲೂರು ಮ್ಯಾನ್‌ಷನ್, ದೊಡ್ಡಪೇಟೆ, ಕೋಲಾರ. |

**ಅಧಿಸೂಚನೆ**

ಅರ್ಜಿದಾರರಾದ ಶ್ರೀ ತಿಮ್ಮರಾಯಪ್ಪ ಅವರು ತಮ್ಮ ಮಗನಾದ ಟಿ. ಮೂರ್ತಿ ಅವರು 1ನೇ ಪ್ರತಿವಾದಿ ಶ್ರೀ ಸೊನ್ನೇಗೌಡ ಬಿನ್ ಗೋಪಾಲಪ್ಪ ರವರ ಬಳಿ ಕೂಲಿ ಆಗಿದ್ದು, ಕರ್ತವ್ಯ ನಿರತನಾಗಿದ್ದಾಗ ದಿನಾಂಕ: 27.05.2004 ರಂದು ಅಪಘಾತಕ್ಕೀಡಾಗಿ ಮರಣ ಹೊಂದಿರುತ್ತಾರೆಂದು ತಿಳಿಸಿ ಮೃತನ ಅವಲಂಬಿತರಾದ ಅವರಿಗೆ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಿದ್ದು ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದರೆ ಮತ್ತು ಈ ಅರ್ಜಿಗೆ ಸಂಬಂಧಿಸಿ ಇನ್ನಿತರೆ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದ ದಿನದಿಂದ 30 ದಿನಗಳ ಒಳಗಾಗಿ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ

ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಂ ಅರ್ಜಿ:ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮ ಜರುಗಿಸುತ್ತದೆಂದು ತಿಳಿಸಲಾಗಿದೆ.

ಈ ಅಧಿಸೂಚನೆಯನ್ನು ನನ್ನ ಹಸ್ತಾಕ್ಷರ ಮತ್ತು ಈ ನ್ಯಾಯಾಲಯದ ಮೊಹರಿನೊಂದಿಗೆ ಇದೇ ದಿನಾಂಕ: 30.09.2004 ರಂದು ನೀಡಲಾಗಿದೆ.

**ಜಿ. ಚಿಕ್ಕಣ್ಣ**

ಪಿ.ಆರ್. 1444 ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಕೋಲಾರ ಜಿಲ್ಲೆ, ಕೋಲಾರ.

**ಅಧಿಕಾರಿಯುತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು ಇವರ ನ್ಯಾಯಾಲಯದಲ್ಲಿ**

**ಡಿ.ಟಿ.ಸಿ.ಆರ್. ಸಂಖ್ಯೆ: 902/2002-03, ದಿನಾಂಕ: 5ನೇ ಅಕ್ಟೋಬರ್ 2004**

**ಅಬಕಾರಿ ಉಪ ನಿರೀಕ್ಷಕರು 1, ಚಿಕ್ಕಮಗಳೂರು ಉಪ ವಿಭಾಗ ಇವರ ಪ್ರವವ ಸಂಖ್ಯೆ: 92/02-03 ದಿನಾಂಕ: 7ನೇ ಜೂನ್ 2003**

**ಉಪಸ್ಥಿತರು:** ಶ್ರೀ ಕೆ. ಭೀಮಪ್ಪ, ಅಧಿಕಾರಯುತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ (ಪ್ರಭಾರ) ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು.

**ಫಿರ್ಯಾದುದಾರರು:** ಅಬಕಾರಿ ಉಪ ನಿರೀಕ್ಷಕರು 1, ಚಿಕ್ಕಮಗಳೂರು ಉಪ ವಿಭಾಗ.

**ಆಪಾದಿತರು:** ದಿನೇಶ್ ಬಿನ್ ಪುಟ್ಟಸ್ವಾಮಿಗೌಡ ಮತ್ತು ಇತರರು.

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ: 07.06.2003 ರಂದು ಅಬಕಾರಿ ಉಪ ನಿರೀಕ್ಷಕರು 1, ಚಿಕ್ಕಮಗಳೂರು ಉಪ ವಿಭಾಗ, ಇವರು ಸಿಬ್ಬಂದಿಯೊಂದಿಗೆ ಚಿಕ್ಕಮಗಳೂರು ತಾಲ್ಲೂಕು ಕಸಬಾ ಹೋಬಳಿ, ಚಿಕ್ಕಮಗಳೂರು ಜೋಳ್‌ದಾಳ್ ರಸ್ತೆ ಇಂದಾವರ ಗ್ರಾಮದಲ್ಲಿ ಬಜಾಜ್ ಸ್ಕೂಟರ್ ಸಂಖ್ಯೆ: ಸಿಎನ್‌ಎಸ್ 9019 ಅನ್ನು ಅಕ್ರಮ ಕಳ್ಳಭಟ್ಟಿ ಸಾರಾಯಿ ಸಾಗಾಣಿಕೆ ಸಂಬಂಧದಲ್ಲಿ ಅನುಮಾನಗೊಂಡು ತಡೆದು ನಿಲ್ಲಿಸಿ ವಾಹನವನ್ನು ತಪಾಸಣೆ ಮಾಡಲಾಗಿ ವಾಹನದಲ್ಲಿ ಒಟ್ಟು 10.000 ಲೀಟರ್ ಕಳ್ಳಭಟ್ಟಿ ಸಾರಾಯಿ ಇದ್ದು, ಸದರಿ ಕಳ್ಳಭಟ್ಟಿ ಸಾರಾಯಿ ಸಾಗಾಣಿಕೆಗೆ ಸಂಬಂಧಿಸಿದಂತೆ ಸ್ಕೂಟರ್‌ನಲ್ಲಿದ್ದ ವ್ಯಕ್ತಿ ದಿನೇಶ್ ಬಿನ್ ಪುಟ್ಟಸ್ವಾಮಿಗೌಡ ಮತ್ತು ಹರೀಶ್ ಬಿನ್ ಸಗನೇಗೌಡ ಇವರುಗಳು ಸಂಬಂಧಪಟ್ಟ ದಾಖಲಾತಿಗಳನ್ನು ಹಾಜರುಪಡಿಸದೇ ಇದ್ದುದರಿಂದ, ಈ ಬಗ್ಗೆ ಸ್ಥಳದಲ್ಲಿ ಪಂಚರ ಸಮಕ್ಷಮ ಜರುಗಿಸಬೇಕಾದ ಕ್ರಮಗಳನ್ನು ಅನುಸರಿಸಿ ದೊರೆತ ಕಳ್ಳಭಟ್ಟಿ ಸಾರಾಯಿಯನ್ನು ವಾಹನದೊಂದಿಗೆ ಸರ್ಕಾರದ ವಶಕ್ಕೆ ಅಮಾನತ್ತು ಪಡಿಸಿಕೊಂಡು ಪ್ರ.ವ.ವ. ಸಂಖ್ಯೆ: 92/2002-03 ರಲ್ಲಿ ಮೊಕದ್ದಮೆಯನ್ನು ದಾಖಲಿಸಿ ಮುಂದಿನ ತನಿಖೆಗಾಗಿ ಅಬಕಾರಿ ಉಪ ನಿರೀಕ್ಷಕರು, ಚಿಕ್ಕಮಗಳೂರು ಉಪ ವಲಯ ಇವರಿಗೆ ಹಸ್ತಾಂತರಿಸಿ ಈ ಪ್ರಾಧಿಕಾರ ಮತ್ತು ನ್ಯಾಯಾಲಯಕ್ಕೆ ವರದಿ ಮಾಡಿರುತ್ತಾರೆ.

ವಶಪಡಿಸಿಕೊಂಡ ವಾಹನಕ್ಕೆ ಸಂಬಂಧಿಸಿದಂತೆ ಈ ಪ್ರಾಧಿಕಾರವು ಮುಟ್ಟುಗೋಲಿನ ನಡುವಳಿಗಳನ್ನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43 (ಎ) ಅಡಿಯಲ್ಲಿ ಪ್ರಾರಂಭಿಸಿ ವಾಹನದ ಮಾಲೀಕತ್ವದ ಹಾಗೂ ಮೌಲ್ಯದ ವಿವರಗಳನ್ನು ನೀಡುವಂತೆ ಸಂಬಂಧಪಟ್ಟ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಗೆ ಕೋರಿ, ಪತ್ರ ಬರೆದು ಮುಟ್ಟುಗೋಲಿನ ನಡುವಳಿಗಳನ್ನು ಮುಂದುವರೆಸಲಾಯಿತು.

ಚಿಕ್ಕಮಗಳೂರು ಪ್ರಾದೇಶಿಕ ಸಾರಿಗೆ ಅಧಿಕಾರಿಗಳ ಕಛೇರಿಯ ಮೋಟಾರು ವಾಹನ ನಿರೀಕ್ಷಕರು, ಇವರು ವಾಹನಕ್ಕೆ ರೂ.5,000/- ಗಳನ್ನು ಮಾತ್ರ ಬೆಲೆ ನಿಗದಿಪಡಿಸಿರುತ್ತಾರೆ.

ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಚಿಕ್ಕಮಗಳೂರು, ಇವರಿಂದ ಪಡೆಯಲಾದ ಬಿ. ಎಕ್ಸ್ಟ್ರಾಕ್ಟ್ ಆಧಾರದ ಮೇಲೆ ವಾಹನದ ಮಾಲೀಕರಾದ ಶ್ರೀ ಕೆ.ಪಿ. ಪ್ರೇಮನಾಥ್ ಬಿನ್ ಕೆ.ಸಿ. ಪುಟ್ಟೇಗೌಡ ನಾಯಕ್, ಕೂಗಿನ ಬೈಲು ಅಂಚೆ, ಕಿಗ್ಗಾ, ಶೃಂಗೇರಿ ತಾಲ್ಲೂಕು, ಚಿಕ್ಕಮಗಳೂರು ಜಿಲ್ಲೆ, ಇವರಿಗೆ ಕಲಂ 43(ಬಿ) ಅಡಿಯಲ್ಲಿ ನೋಟೀಸ್ ಅನ್ನು ನೋಂದಾಯಿತ ಅಂಚೆ ಮೂಲಕ ನೀಡಿದ್ದು, ಸದರಿ ವಾಹನದ ಮಾಲೀಕರು ನೋಟೀಸ್ ಪಡೆದು ಅವರ ಪರ ವಕೀಲರಾದ ಹೆಚ್.ಆರ್. ಉಮೇಶ್ ಮುಖಾಂತರ ನೋಟೀಸ್‌ಗೆ ಉತ್ತರವಾಗಿ ಸದರಿ ವಾಹನವನ್ನು ದತ್ತಾತ್ರೇಯ ರಾವ್ ಬಿನ್ ಎಲ್. ವೆಂಕಟರಮಣಯ್ಯ, ಅಸಿಸ್ಟೆಂಟ್ ಇಂಜಿನಿಯರ್, ಆರ್.ಎಫ್.ಸಿ. ಸಬ್ ಡಿವಿಜನ್, ಚಳ್ಳಕೆರೆ ತಾಲ್ಲೂಕು, ಚಿತ್ರದುರ್ಗ ಜಿಲ್ಲೆ, ಇವರಿಗೆ ಮಾರಾಟ ಮಾಡಿದ್ದು, ಈ ಸಂಬಂಧ ನಮೂನೆಗಳಿಗೆ ಸಹಿ ಮಾಡಿ ಕೊಡಲಾಗಿದೆ ಎಂದು ತಿಳಿಸಿರುತ್ತಾರೆ. ಈ ಮೇರೆಗೆ ಸದರಿ ದತ್ತಾತ್ರೇಯರಾವ್ ರವರಿಗೆ ನೋಟೀಸ್‌ಅನ್ನು ನೋಂದಾಯಿತ ಅಂಚೆ ಮೂಲಕ ರವಾನಿಸಲು ಕ್ರಮ ಕೈಗೊಂಡಿದ್ದು, ದಿನಾಂಕ: 27.07.2004 ರಂದು ನೋಟೀಸ್ "ದಿ ಅಡ್ರೆಸ್ ರಿರ್ಟನ್ಡ್ ಟು ಸೆಂಡರ್" ಷರಾದೊಂದಿಗೆ ಈ ಪ್ರಾಧಿಕಾರಕ್ಕೆ ಮರಳಿ ಬಂದಿರುತ್ತದೆ.

ಸದರಿ ಪ್ರಕರಣದಲ್ಲಿ ಆಪಾದಿತರಾದ ದಿನೇಶ್ ಬಿನ್ ಪುಟ್ಟಸ್ವಾಮಿಗೌಡ ಮತ್ತು ಹರೀಶ್ ಬಿನ್ ಸಗನೇಗೌಡ ಇವರುಗಳಿಗೂ ಸಹಾ ನೋಟೀಸ್‌ಅನ್ನು ನೋಂದಾಯಿತ ಅಂಚೆ ಮೂಲಕ ರವಾನಿಸಲು ಕ್ರಮ ಕೈಗೊಂಡಿದ್ದು, ದಿನೇಶ್ ಬಿನ್ ಪುಟ್ಟಸ್ವಾಮಿಗೌಡ ಇವರಿಗೆ ನೀಡಿದ ದಿನಾಂಕ: 29.07.2004 ರಂದು ನೋಟೀಸ್ "ರಿಟರ್ನ್ ಟು ಸೆಂಡರ್" ಎಂಬ ಷರಾದೊಂದಿಗೆ ಈ ಪ್ರಾಧಿಕಾರಕ್ಕೆ ಮರಳಿ ಬಂದಿರುತ್ತದೆ. ಸದರಿ ದಿನೇಶ್‌ರವರು ಊರಿನಲ್ಲಿ ಇರುವುದಿಲ್ಲ. ಇನ್ನೊಬ್ಬ ಆಪಾದಿತ ಹರೀಶ್ ಬಿನ್ ಸಗನೇಗೌಡ ಇವರಿಗೆ ಖುದ್ದು ಅಬಕಾರಿ ಉಪ ನಿರೀಕ್ಷಕರು ಚಿಕ್ಕಮಗಳೂರು ಉಪ ವಲಯ ಇವರು ಜಾರಿಮಾಡಿ ಈ ಪ್ರಾಧಿಕಾರಕ್ಕೆ ವರದಿ ಸಲ್ಲಿಸಿರುತ್ತಾರೆ.

ಸದರಿ ಪ್ರಕರಣದಲ್ಲಿ ವಾಹನದ ಮಾಲೀಕರು ವಾಹನ ಮಾರಾಟ ಮಾಡಿರುವುದಾಗಿ ತಿಳಿಸಿದ್ದು, ಆಪಾದಿತ ಹರೀಶ್ ಇವರಿಗೆ ನೋಟೀಸ್ ಜಾರಿಯಾಗಿದ್ದರೂ, ಹಾಗೂ ಈವರೆವಿಗೂ ಸಹಾ ಪ್ರಾಧಿಕಾರದ ಮುಂದೆ ಬಂದು ಲಿಖಿತ ಸಮಜಾಯಿಷಿ ಸಲ್ಲಿಸಿರುವುದಿಲ್ಲ. ವಶಪಡಿಸಿಕೊಂಡ ವಾಹನದ ಮುಟ್ಟುಗೋಲಿನ ನಡುವಳಿಗಳು ಪೂರ್ಣಗೊಂಡಿದ್ದು, ಜಪ್ತಾಗಿರುವ ವಾಹನಕ್ಕೆ ಇದುವರೆವಿಗೂ ಪ್ರಾಧಿಕಾರದ ಮುಂದೆ ವಾಹನಕ್ಕೆ ಸಂಬಂಧಿಸಿದಂತೆ ಯಾರು ಬಂದು ಹಕ್ಕು ಸಾಧಿಸದೇ ಇರುವುದರಿಂದ ಸದರಿಯವರುಗಳಿಗೆ ವಾಹನದ ಮೇಲೆ ಆಸಕ್ತಿ

ಇಲ್ಲವೆಂದು ಪರಿಗಣಿಸಲಾಗಿರುತ್ತದೆ. ವಾಹನವು ಇಲಾಖೆಯ ವಶದಲ್ಲಿದ್ದು, ತಟಸ್ಥ ಸ್ಥಿತಿಯಲ್ಲಿ ಹಾಗೆಯೇ ಬಿಟ್ಟಲ್ಲಿ ಪ್ರಕೃತಿಯ ವೈಪರೀತ್ಯಗಳಿಗನುಗುಣವಾಗಿ ಸರ್ಕಾರಕ್ಕೆ ಬರಬಹುದಾದ ರಾಜಸ್ವಕ್ಕೆ ಧಕ್ಕೆ ಉಂಟಾಗುವ ಸಂಭವವಿರುವುದರಿಂದ ಮೊಕದ್ದಮೆಯ ಶೀಘ್ರ ವಿಲೇವಾರಿಯ ದೃಷ್ಟಿ, ಸರ್ಕಾರದ ಆದಾಯದ ದೃಷ್ಟಿಯಿಂದ ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಸಿ) ಅಡಿಯಲ್ಲಿ ವಶಪಡಿಸಿಕೊಂಡ ವಾಹನವನ್ನು ಮುಟ್ಟುಗೋಲು ಹಾಕಿಕೊಳ್ಳಲು ಈ ಪ್ರಾಧಿಕಾರಕ್ಕೆ ಮನವರಿಕೆಯಾಗಿರುವುದರಿಂದ ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ**

ಶ್ರೀ ಕೆ. ಭೀಮಪ್ಪ ಅಧಿಕಾರಯುತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ (ಪ್ರಭಾರ), ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು ಆದ ನಾನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಎ) ಅಡಿಯಲ್ಲಿ ಪ್ರದತ್ತವಾಧ ಅಧಿಕಾರವನ್ನು ಚಲಾಯಿಸಿ ಕಲಂ 43(ಬಿ) ಅಡಿಯಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿ ಈ ಪ್ರಕರಣದಲ್ಲಿ ವಶಪಡಿಸಿಕೊಂಡ ವಾಹನ ಸಂಖ್ಯೆ: ಸಿಎನ್‌ಎಸ್:9019 (ಬಜಾಜ್ ಸ್ಕೂಟರ್) ಅನ್ನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಸಿ) ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿರುತ್ತೇನೆ.

ಈ ಆದೇಶವನ್ನು ಇಂದು ಅಂದರೆ 5ನೇ ಅಕ್ಟೋಬರ್ 2004 ರಂದು ಬೆರಳಚ್ಚುಗಾರರಿಗೆ ಉಖ್ತಲೇಖನ ಕೊಟ್ಟು ಗಣಕಯಂತ್ರದಲ್ಲಿ ಬೆರಳಚ್ಚಿಸಿದ ನಂತರ ತಪ್ಪುಗಳನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಗಿತ್ತು.

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಯಲ್ಲಿರುತ್ತದೆ.

ಅಧಿಕಾರಯುತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್,
ಪಿ.ಆರ್. 1446 ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು

**ಅಧಿಕಾರಿಯುತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು ಇವರ ನ್ಯಾಯಾಲಯದಲ್ಲಿ**

**ಡಿ.ಟಿ.ಸಿ.ಆರ್. ಸಂಖ್ಯೆ: 285/2002-03, ದಿನಾಂಕ: 5ನೇ ಅಕ್ಟೋಬರ್ 2004**

**ಚಿಕ್ಕಮಗಳೂರು ನಗರ ಪೋ.ಠಾ.ಕ್ರೈಂ.ಸಂ: 151/2002 ದಿನಾಂಕ: 30ನೇ ಜುಲೈ 2002**

**ಅಬಕಾರಿ ಸಬ್ ಇನ್ಸ್‌ಪೆಕ್ಟರ್, ಚಿಕ್ಕಮಗಳೂರು ಉಪ ವಲಯ ಇವರ ಪ್ರವವ ಸಂಖ್ಯೆ: 5/2002-03 ದಿನಾಂಕ: 3ನೇ ಜುಲೈ 2002**

**ಉಪಸ್ಥಿತರು:** ಶ್ರೀ ಕೆ. ಭೀಮಪ್ಪ, ಅಧಿಕಾರಯುತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ (ಪ್ರಭಾರ) ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು.

**ಫಿರ್ಯಾದುದಾರರು:** ಪೊಲೀಸ್ ಸಬ್ ಇನ್ಸ್‌ಪೆಕ್ಟರ್, ಚಿಕ್ಕಮಗಳೂರು ನಗರ ಪೊಲೀಸ್ ಠಾಣೆ.

**ಆಪಾದಿತರು:** ಪ್ರದೀಪ್ ಬಿನ್ ಕೆಂಪಯ್ಯ.

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ: 30.07.2002 ರಂದು ಆರಕ್ಷಕ ಉಪ ನಿರೀಕ್ಷಕರು, ಚಿಕ್ಕಮಗಳೂರು ನಗರ ಪೊಲೀಸ್ ಠಾಣೆ ಇವರು ಸಿಬ್ಬಂದಿಯೊಂದಿಗೆ ಚಿಕ್ಕಮಗಳೂರು ನಗರದ ಹಿರೇಮಗಳೂರು ವೇ. ಬ್ರಿಡ್ಜ್ ಹತ್ತಿರ ಟೆಂಪೋ ಟ್ರಾಕ್ಸ್ ಸಂಖ್ಯೆ: ಕೆಎ 19 ಎನ್.4959 ಅನ್ನು ಅಕ್ರಮ ಮದ್ಯ ಸಾಗಾಣಿಕೆ ಸಂಬಂಧದಲ್ಲಿ ಅನುಮಾನಗೊಂಡು ತಡೆದು ನಿಲ್ಲಿಸಿ ತಪಾಸಣೆ ಮಾಡಲಾಗಿ ವಾಹನದಲ್ಲಿ ಒಟ್ಟು 216.000 ಲೀಟರ್ ದೇಶಿಯ ಮದ್ಯವಿದ್ದು, ಸದರಿ ಮದ್ಯ ಸಾಗಾಣಿಕೆಗೆ ಸಂಬಂಧಿಸಿದಂತೆ ವಾಹನದಲ್ಲಿದ್ದ ವ್ಯಕ್ತಿ ಪ್ರದೀಪ್ ಬಿನ್ ಕೆಂಪಯ್ಯ ಇವರು ಅಧಿಕೃತ ರಹದಾರಿ ಪತ್ರಗಳನ್ನಾಗಲೀ ಅಥವಾ ಸಾಗಾಣಿಕೆಗೆ ಸಂಬಂಧಪಟ್ಟ ದಾಖಲಾತಿಗಳನ್ನು ಹಾಜರುಪಡಿಸದೇ ಇದ್ದುದರಿಂದ, ತೆರಿಗೆ ರಹಿತವಾದುದೆಂದು ದೃಢಪಡಿಸಿಕೊಂಡು ಈ ಬಗ್ಗೆ ಸ್ಥಳದಲ್ಲಿ ಪಂಚರ ಸಮಕ್ಷಮ ಜರುಗಿಸಬೇಕಾದ ಕ್ರಮಗಳನ್ನು ಅನುಸರಿಸಿ ದೊರೆತ ಮದ್ಯವನ್ನು ವಾಹನದೊಂದಿಗೆ ಸರ್ಕಾರದ ವಶಕ್ಕೆ ಅಮಾನತ್ತು ಪಡಿಸಿಕೊಂಡು ಠಾಣೆಯ ಕ್ರೈಂ ಸಂಖ್ಯೆ: 151/2002 ರಲ್ಲಿ ಮೊಕದ್ದಮೆಯನ್ನು ದಾಖಲಿಸಿ, ಆರೋಪಿಯನ್ನು ದಸ್ತಗಿರಿಗೊಳಿಸಿ ಮುಂದಿನ ತನಿಖೆಗಾಗಿ ಅಬಕಾರಿ ಉಪ ನಿರೀಕ್ಷಕರು, ಚಿಕ್ಕಮಗಳೂರು ಉಪ ವಲಯ ಇವರಿಗೆ ಹಸ್ತಾಂತರಿಸಿದ ಮೇರೆಗೆ, ಸದರಿಯವರು ತನಿಖೆ ಮುಂದುವರೆಸಿ ಪ್ರ.ವ.ವ. ಸಂಖ್ಯೆ: 05/2002-03, ದಿನಾಂಕ: 3.8.2002 ರಲ್ಲಿ ಮೊಕದ್ದಮೆಯನ್ನು ದಾಖಲಿಸಿ ನ್ಯಾಯಾಲಯಕ್ಕೆ ಮತ್ತು ಈ ಪ್ರಾಧಿಕಾರಕ್ಕೆ ವರದಿ ಮಾಡಿರುತ್ತಾರೆ.

ವಶಪಡಿಸಿಕೊಂಡ ವಾಹನ ಹಾಗೂ ದೇಶಿಯ ಮದ್ಯಕ್ಕೆ ಸಂಬಂಧಿಸಿದಂತೆ ಈ ಪ್ರಾಧಿಕಾರವು ಮುಟ್ಟುಗೋಲಿನ ನಡುವಳಿಗಳನ್ನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ.43(ಎ) ಅಡಿಯಲ್ಲಿ ಪ್ರಾರಂಭಿಸಿ ವಾಹನದ ಮಾಲೀಕತ್ವದ ಹಾಗೂ ಮೌಲ್ಯದ ವಿವರಗಳನ್ನು ನೀಡುವಂತೆ ಸಂಬಂಧಪಟ್ಟ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಗೆ ಕೋರಿ, ಪತ್ರ ಬರೆದು ಮುಟ್ಟುಗೋಲಿನ ನಡುವಳಿಗಳನ್ನು ಮುಂದುವರೆಸಲಾಯಿತು.

ಶ್ರೀ ಪ್ರದೀಪ್ ಬಿನ್ ಕೆಂಪೇಗೌಡ, ಪಿಳ್ಳೇನಹಳ್ಳಿ, ಸಖರಾಯಪಟ್ಟಣ ಹೋಬಳಿ, ಕಡೂರು ತಾಲ್ಲೂಕು, ಚಿಕ್ಕಮಗಳೂರು ಜಿಲ್ಲೆ, ಇವರು ಈ ಪ್ರಾಧಿಕಾರಕ್ಕೆ ವಕೀಲರಾದ ಬಿ. ದೊರೆ ಇವರ ಮುಖಾಂತರ ವಾಹನ ಮಧ್ಯಂತರ ವಶಕ್ಕೆ ಬಿಡುಗಡೆಗೊಳಿಸಲು ಕೋರಿ ದಿನಾಂಕ: 05.08.2002 ರಂದು ಅರ್ಜಿ ಸಲ್ಲಿಸಿರುತ್ತಾರೆ.

ಚಿಕ್ಕಮಗಳೂರು ಪ್ರಾದೇಶಿಕ ಸಾರಿಗೆ ಅಧಿಕಾರಿಗಳ ಕಛೇರಿಯ ಮೋಟಾರು ವಾಹನ ನಿರೀಕ್ಷಕರು, ಇವರು ವಾಹನಕ್ಕೆ ರೂ.30,000/- (ಮೂವತ್ತು ಸಾವಿರ ರೂಪಾಯಿ) ಗಳನ್ನು ಮಾತ್ರ ಬೆಲೆ ನಿಗದಿಪಡಿಸಿರುತ್ತಾರೆ.

ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಚಿಕ್ಕಮಗಳೂರು, ಇವರಿಂದ ಪಡೆಯಲಾದ "ಬಿ" ಎಕ್ಸ್ಟ್ರ್ಯಾಕ್ಟ್ ಆಧಾರದ ಮೇಲೆ ವಾಹನದ ಮಾಲೀಕರಾದ ಶ್ರೀ ಪ್ರದೀಪ್ ಬಿನ್ ಕೆಂಪೇಗೌಡ, ಪಿಳ್ಳೇನಹಳ್ಳಿ, ಸಖರಾಯಪಟ್ಟಣ ಹೋಬಳಿ, ಕಡೂರು ತಾಲ್ಲೂಕು ಚಿಕ್ಕಮಗಳೂರು

ಜಿಲ್ಲೆ, ಇವರು ಈಗಾಗಲೇ ವಕೀಲರ ಮೂಲಕ ವಾಹನ ಮಧ್ಯಂತರ ವಶಕ್ಕೆ ಬಿಡುಗಡೆಗೊಳಿಸಲು ಕೋರಿ ಅರ್ಜಿ ಸಲ್ಲಿಸಿದ್ದು, ಸದರಿಯವರು ಇದುವರೆವಿಗೂ ಈ ಪ್ರಾಧಿಕಾರಕ್ಕೆ ಮುಂದೆ ಹಾಜರಾಗಿರುವುದಿಲ್ಲ. ಅರ್ಜಿದಾರರಾದ ವಾಹನ ಮಾಲೀಕರಿಗೆ ಇವರಿಗೆ ಕಲಂ 43(ಬಿ) ಅಡಿಯಲ್ಲಿ ನೋಟೀಸ್ ಅನ್ನು ನೋಂದಾಯಿತ ಅಂಚೆ ಮೂಲಕ ಜಾರಿಯಾಗಿ ಸ್ವೀಕೃತಿ ಬಂದಿದ್ದು, ವಿಚಾರಣೆಗೆ ಹಾಜರಾಗಲು ಅರ್ಜಿದಾರರಿಗೆ ದಿನಾಂಕ: 01.04.2004 ರಂದು ನೋಟೀಸ್ ನೀಡಲಾಗಿ, ಸದರಿ ನೋಟೀಸ್ "ನಾಟ್ ಕ್ಲೈಮ್ಡ್ ರಿರ್ಟನ್ಡ್ ಟು ಸೆಂಡರ್" ಷರಾದೊಂದಿಗೆ ಈ ಪ್ರಾಧಿಕಾರಕ್ಕೆ ಮರಳಿ ಬಂದಿರುತ್ತದೆ.

ಸದರಿ ವಾಹನ ಮಾಲೀಕರಿಗೆ ಅಬಕಾರಿ ಉಪ ನಿರೀಕ್ಷಕರು ಚಿಕ್ಕಮಗಳೂರು ಉಪ ವಲಯ ಇವರ ಮೂಲಕ ನೋಟೀಸ್ ಖುದ್ದು ಜಾರಿಗೊಳಿಸಲು ನೀಡಿದ್ದು, ಸದರಿಯವರು ವಾಹನ ಮಾಲೀಕರಾದ ಶ್ರೀ ಪ್ರದೀಪ್ ಬಿನ್ ಕೆಂಪೇಗೌಡ, ಪಿಳ್ಳೇನಹಳ್ಳಿ, ಸಖರಾಯಪಟ್ಟಣ ಹೋಬಳಿ, ಕಡೂರು ತಾಲ್ಲೂಕು, ಚಿಕ್ಕಮಗಳೂರು ಜಿಲ್ಲೆ, ಇವರು ಸದರಿ ವಿಳಾಸಕ್ಕೆ ಭೇಟಿ ನೀಡಿದಾಗ ಮನೆಗೆ ಬೀಗ ಹಾಕಿ ಊರು ಬಿಟ್ಟು ಹೋಗಿರುತ್ತಾರೆಂದು ತಿಳಿದು ಬಂದ ಮೇರೆಗೆ ಈ ಬಗ್ಗೆ ಸ್ಥಳದಲ್ಲಿ ಮಹಜರ್ ಮಾಡಿ ಈ ಪ್ರಾಧಿಕಾರಕ್ಕೆ ವರದಿ ಸಲ್ಲಿಸಿರುತ್ತಾರೆ.

ಸದರಿ ಪ್ರಕರಣದಲ್ಲಿ ವಶಪಡಿಸಿಕೊಂಡ 216.000 ಲೀಟರ್ ಮದ್ಯದಲ್ಲಿ ರಾಸಾಯನಿಕ ಪರೀಕ್ಷೆಗೆ ತೆಗೆದುಳಿದ 215.820 ಲೀಟರ್ ಮದ್ಯವು ಈಗಾಗಲೇ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿದ್ದು, ವಾಹನ ಮಾಲೀಕರಿಗೆ ಒಂದು ಬಾರಿ ನೋಟೀಸ್ ಜಾರಿಯಾಗಿದ್ದರೂ, ಹಾಗೂ ವಿಳಾಸಕ್ಕೆ ವಾಸವಿಲ್ಲದೆ ಇರುವುದರಿಂದ, ವಾಹನ ಮಾಲೀಕರು ಮತ್ತು ಅವರ ಪರ ವಕೀಲರು ವಾಹನ ಮಧ್ಯಂತರ ವಶಕ್ಕೆ ಬಿಡುಗಡೆಗೊಳಿಸಲು ಕೋರಿ ಅರ್ಜಿ ಸಲ್ಲಿಸಿದ್ದು, ಈವರೆವಿಗೂ ಸಹಾ ಪ್ರಾಧಿಕಾರದ ಮುಂದೆ ಬಂದು ಹಕ್ಕು ಸಾಧಿಸಿರುವುದಿಲ್ಲ. ಈ ಬಗ್ಗೆ ವಾಹನ ಮಾಲೀಕರಿಗೆ ವಾಹನದ ಮೇಲೆ ಆಸಕ್ತಿ ಇಲ್ಲವೆಂದು ಪರಿಗಣಿಸಲಾಗಿರುತ್ತದೆ. ವಶಪಡಿಸಿಕೊಂಡ ವಾಹನದ ಮುಟ್ಟುಗೋಲಿನ ನಡುವಳಿಗಳು ಪೂರ್ಣಗೊಂಡಿದ್ದು, ಜಪ್ತಾಗಿರುವ ವಾಹನವು ಇಲಾಖೆಯ ವಶದಲ್ಲಿದ್ದು, ತಟಸ್ಥ ಸ್ಥಿತಿಯಲ್ಲಿ ಹಾಗೆಯೇ ಬಿಟ್ಟಲ್ಲಿ ಪ್ರಕೃತಿಯ ವೈಪರೀತ್ಯಗಳಿಗನುಗುಣವಾಗಿ ಸರ್ಕಾರಕ್ಕೆ ಬರಬಹುದಾದ ರಾಜಸ್ವಕ್ಕೆ ಧಕ್ಕೆ ಉಂಟಾಗುವ ಸಂಭವವಿರುವುದರಿಂದ ಮೊಕದ್ದಮೆಯ ಶೀಘ್ರ ವಿಲೇವಾರಿಯ ದೃಷ್ಟಿ, ಸರ್ಕಾರದ ಆದಾಯದ ದೃಷ್ಟಿಯಿಂದ ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ.43(ಸಿ) ಅಡಿಯಲ್ಲಿ ವಶಪಡಿಸಿಕೊಂಡ ವಾಹನವನ್ನು ಮುಟ್ಟುಗೋಲು ಹಾಕಿಕೊಳ್ಳಲು ಈ ಪ್ರಾಧಿಕಾರಕ್ಕೆ ಮನವರಿಕೆಯಾಗಿರುವುದರಿಂದ ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ**

ಶ್ರೀ ಕೆ. ಭೀಮಪ್ಪ ಅಧಿಕಾರಯುತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್ (ಪ್ರಭಾರ), ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು ಆದ ನಾನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಎ) ಅಡಿಯಲ್ಲಿ ಪ್ರದತ್ತವಾಧ ಅಧಿಕಾರವನ್ನು ಚಲಾಯಿಸಿ ಕಲಂ 43(ಬಿ) ಅಡಿಯಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿ ಈ ಪ್ರಕರಣದಲ್ಲಿ ವಶಪಡಿಸಿಕೊಂಡ ವಾಹನ ಸಂಖ್ಯೆ: ಕೆಎ.19 ಎನ್.4959 (ಟೆಂಪೋ ಟ್ರಾಕ್ಸ್) ಅನ್ನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಸಿ) ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿರುತ್ತೇನೆ.

ಈ ಆದೇಶವನ್ನು ಇಂದು ಅಂದರೆ 5ನೇ ಅಕ್ಟೋಬರ್ 2004 ರಂದು ಬೆರಳಚ್ಚುಗಾರರಿಗೆ ಉಖ್ತಲೇಖನ ಕೊಟ್ಟು ಗಣಕಯಂತ್ರದಲ್ಲಿ ಬೆರಳಚ್ಚಿಸಿದ ನಂತರ ತಪ್ಪುಗಳನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಗಿತ್ತು.

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಯಲ್ಲಿರುತ್ತದೆ.

ಅಧಿಕಾರಯುತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್,
ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು

ಪಿ.ಆರ್. 1447

## ಜಿಲ್ಲಾ ಪರಿಶಿಷ್ಟ ವರ್ಗಗಳ ಕಲ್ಯಾಣ ಅಧಿಕಾರಿಗಳ ಕಾರ್ಯಾಲಯ, ಬೆಳಗಾವಿ

**ಪ್ರಕಟಣೆ ಸಂಖ್ಯೆ: ಜಿಪವಕ:ಲೆಕ್ಕ:ಕಾನೂನು ತರಬೇತಿ:ತಶಿವೇ:ವಿವ.11:04-05, ದಿನಾಂಕ: 24ನೇ ಸೆಪ್ಟೆಂಬರ್ 2004**

**ವಿಷಯ:** ಪರಿಶಿಷ್ಟ ವರ್ಗದ ಕಾನೂನು ಪದವೀಧರರಿಗೆ ಆಡಳಿತ ನ್ಯಾಯಾಧೀಕರಣದಲ್ಲಿ ತರಬೇತಿಗಾಗಿ 2004-05ನೇ ಸಾಲಿಗೆ ಅಭ್ಯರ್ಥಿಗಳನ್ನು ಆಯ್ಕೆ ಮಾಡುವ ಕುರಿತು.

**ಉಲ್ಲೇಖ:** 1) ಸರ್ಕಾರದ ಆದೇಶ ನಂ. ಎಸ್‌ಡಬ್ಲ್ಯೂಎಲ್ 68 ಎಸ್‌ಡಬ್ಲ್ಯೂ 89, ದಿನಾಂಕ: 2.11.1990.
2) ಸರ್ಕಾರದ ಆದೇಶ ಸಂಖ್ಯೆ: ಸಕಇ 421 ಪಕವಿ 95, ದಿನಾಂಕ: 29.7.97.
3) ಸರ್ಕಾರದ ಆದೇಶ ಸಂಖ್ಯೆ: ಸಕಇ 535 ಪಕವಿ 2000, ದಿನಾಂಕ: 28.3.2001.

2004-05ನೇ ಸಾಲಿಗೆ ಬೆಳಗಾವಿ ಜಿಲ್ಲೆಯ ಪರಿಶಿಷ್ಟ ವರ್ಗದ ಕಾನೂನು ಪದವೀಧರರಿಗೆ ಆಡಳಿತ ನ್ಯಾಯಾಧೀಕರಣದಲ್ಲಿ ತರಬೇತಿ ನೀಡುವ ಕುರಿತು ಅರ್ಹ ಅಭ್ಯರ್ಥಿಗಳಿಂದ ಈ ಕೆಳಕಂಡ ನಿಬಂಧನೆಗೆ ಒಳಗೊಂಡಂತೆ ಅರ್ಜಿಗಳನ್ನು ಆಹ್ವಾನಿಸಲಾಗಿದೆ.

1. ಬೆಳಗಾವಿ ಜಿಲ್ಲೆಗೆ ಸಂಬಂಧಿಸಿದ ಹಾಗೂ ವಕೀಲ ವೃತ್ತಿ ನಡೆಸಲು ಅರ್ಹತೆಯುಳ್ಳ ಕಾನೂನು ಪದವೀಧರರು ಮಾತ್ರ ಈ ತರಬೇತಿಗೆ ಅರ್ಹರು.
2. ಮಹಿಳಾ ಅಭ್ಯರ್ಥಿಗಳಿಗೆ ಆದ್ಯತೆ ನೀಡಲಾಗುವುದು.
3. ಅಭ್ಯರ್ಥಿಯು ಅರ್ಜಿಗಳನ್ನು ಸ್ವೀಕರಿಸುವ ಕೊನೆಯ ದಿನಾಂಕದಂದು 35 ವರ್ಷಗಳನ್ನು ಮೀರಿರಬಾರದು ಈ ಕುರಿತು ಅಧಿಕೃತ ಪ್ರಮಾಣಪತ್ರ ಲಗತ್ತಿಸಬೇಕು.
4. ಅರ್ಜಿಯನ್ನು ಸಲ್ಲಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕಕ್ಕೆ (2) ಎರಡು ವರ್ಷದೊಳಗೆ ತೇರ್ಗಡೆಯಾದ ಕಾನೂನು ಪದವೀಧರರು ಈ ತರಬೇತಿಗೆ ಅರ್ಹರು.

5. ಆಯ್ಕೆಯಾದ ಅಭ್ಯರ್ಥಿಗಳಿಗೆ ನಾಲ್ಕು ವರ್ಷಗಳ ತರಬೇತಿ ನೀಡಲಾಗುವುದು ಹಾಗೂ ಮಾಹೆಯಾನ ರೂ.1000-00 ತರಬೇತಿ ಭತ್ಯೆ ನೀಡಲಾಗುವುದು. ತರಬೇತಿಯನ್ನು ಮಧ್ಯದಲ್ಲಿ ಬಿಟ್ಟು ಹೋಗಬಾರದು. ಕೇಂದ್ರ ಹಾಗೂ ರಾಜ್ಯ ಸರ್ಕಾರದಲ್ಲಿ ಉದ್ಯೋಗ ದೊರೆತಲ್ಲಿ ಈ ನಿಬಂಧನೆ ಅನ್ವಯವಾಗುವುದಿಲ್ಲ.
6. ಅಪೂರ್ಣ ಹಾಗೂ ಅವಧಿ ಮೀರಿ ಬಂದ ಅರ್ಜಿಗಳನ್ನು ತಿರಸ್ಕರಿಸಲಾಗುವುದು.
7. ಆಯ್ಕೆಯಾದ ಅಭ್ಯರ್ಥಿಗಳನ್ನು ಜಿಲ್ಲಾ ಪಬ್ಲಿಕ್ ಪ್ರಾಸಿಕ್ಯೂಟರ್ ಸರ್ಕಾರಿ ವಕೀಲರು ಅಥವಾ 20 ವರ್ಷಗಳಿಗಿಂತ ಕಡಿಮೆ ಇಲ್ಲದ ವಕೀಲ ವೃತ್ತಿಯಲ್ಲಿ ಅನುಭವವಿರುವ ಖಾಸಗಿ ಹಿರಿಯ ವಕೀಲರಲ್ಲಿ ತರಬೇತಿ ಪಡೆಯಲು ನಿಯೋಜಿಸಲಾಗುವುದು.
8. ಆಯ್ಕೆಯಾದ ಅಭ್ಯರ್ಥಿಯು ಸರ್ಕಾರದ ಎಲ್ಲ ನಿಬಂಧನೆಗೆ ಬದ್ಧನಾಗಿರುತ್ತೇನೆ ಎಂದು ರೂ.20 ಮುಚ್ಚಳಿಕೆಯನ್ನು ಬರೆದು ಕೊಡತಕ್ಕದ್ದು.
9. ಆಯ್ಕೆಯಾದ ಅಭ್ಯರ್ಥಿಯು ಸುಳ್ಳು ಮಾಹಿತಿ ಹಾಗೂ ಪ್ರಮಾಣಪತ್ರಗಳನ್ನು ಒದಗಿಸಿದಲ್ಲಿ ಶಿಕ್ಷೆಗೊಳಪಡುವುದಲ್ಲದೆ ಅವನ್ನು ಪಡೆದುಕೊಂಡ ತರಬೇತಿ ಭತ್ಯೆಯ ಪೂರ್ತಿ ಹಣವನ್ನು ವಾರ್ಷಿಕ ಶೇ.10 ರಂತೆ ಬಡ್ಡಿಯೊಂದಿಗೆ ವಸೂಲು ಮಾಡಲಾಗುವುದು. ಒಂದು ವೇಳೆ ಬಾಕಿ ವಸೂಲಿ ಉಳಿದಲ್ಲಿ ಭೂ ಕಂದಾಯ ಬಾಕಿ ನಿಯಮಾವಳಿಗಳನ್ವಯ ವಸೂಲಿ ಮಾಡಲಾಗುವುದು.
10. ಅಭ್ಯರ್ಥಿಗಳು ನಿಗದಿತ ಅರ್ಜಿ ನಮೂನೆಗಳನ್ನು ಹಾಗೂ ಹೆಚ್ಚಿನ ಮಾಹಿತಿಯನ್ನು ಕಛೇರಿ ನಡೆಯುವ ವೇಳೆಯಲ್ಲಿ ಜಿಲ್ಲಾ ಪರಿಶಿಷ್ಟ ವರ್ಗಗಳ ಕಲ್ಯಾಣ ಅಧಿಕಾರಿಗಳ ಕಾರ್ಯಾಲಯ, ಬೆಳಗಾವಿ ನೆಹರು ನಗರ ಇವರ ಕಛೇರಿಯಲ್ಲಿ ಪಡೆದುಕೊಳ್ಳಲು ಸೂಚಿಸಿದೆ.
11. ಅರ್ಹ ಅಭ್ಯರ್ಥಿಗಳಿಗೆ ಸಂದರ್ಶನ ದಿನಾಂಕವನ್ನು ಮತ್ತು ಸ್ಥಳವನ್ನು ತಿಳಿಸಲಾಗುವುದು.
12. ಅಭ್ಯರ್ಥಿಗಳು ಭರ್ತಿ ಮಾಡಿದ ನಿಗದಿತ ಅರ್ಜಿಯೊಂದಿಗೆ ಅವಶ್ಯಕ ಮಾಹಿತಿಗಳಾದ ಪದವಿ ಪರೀಕ್ಷೆ ಹಾಗೂ ಪ್ರಥಮ, ದ್ವಿತೀಯ, ತೃತೀಯ ವರ್ಷದ ಕಾನೂನು ಪರೀಕ್ಷೆಗಳ ದೃಢೀಕೃತ ಅಂಕಪಟ್ಟಿ ಮತ್ತು ತೇರ್ಗಡೆ ಹೊಂದಿದ ಪ್ರಮಾಣಪತ್ರ, ಜನ್ಮ ದಿನಾಂಕಪತ್ರ ಅಥವಾ ಟಿ.ಸಿ. ಮತ್ತು ಬಾರ್ ಅಸೋಸಿಯೇಶನ್‌ದಲ್ಲಿ ಸದಸ್ಯತ್ವ ಪಡೆದ ಬಗ್ಗೆ ಪ್ರಮಾಣಪತ್ರ ಲಗತ್ತಿಸಬೇಕು.
13. ಅರ್ಜಿಗಳನ್ನು ಸ್ವೀಕರಿಸುವ ಕೊನೆಯ ದಿನಾಂಕ: 5.10.2004.

ಪಿ.ಆರ್. 1448 ಜಿಲ್ಲಾ ಪರಿಶಿಷ್ಟ ವರ್ಗಗಳ ಕಲ್ಯಾಣ ಅಧಿಕಾರಿ, ಬೆಳಗಾವಿ.

**PROCEEDINGS OF THE REGISTRAR OF CO-OPERATIVE SOCIETIES IN KARNATAKA, BANGALORE**

**No: LDB/2/82/DEB/2004-05, Dated: 25th September 2004**

**Sub:** Floatation of Special Development Debentures by the KSCA&RD Bank under various schemes for Rs.7,05,62,000/- issue of orders reg.

**Ref:**
(1) Proposal No: FS/DEB/245/2004-05, dated: 22.9.2004 of the KSCA&RD Bank Ltd., Bangalore addressed to NABARD, Bangalore forwarding the proposal for Floatation of Special Development Debentures for Rs.7,05,62,000/- for their approval.
(2) Letter No: NB/(BL)/ICD/5013/LDB-12/2004-05, Dated: 24.9.2004 of the NABARD, Bangalore addressed to the Managing Director, KSCA&RD Bank, under copy to the Registrar of Co-operative Societies in Karnataka, Bangalore conveying their approval to the proposal cited above at 1, for Rs.7,05,62,000/-
(3) Government O.M.NO. FD 95 RLG 68, Dated: 11.11.1971.
(4) Letter No. CMW 192 CLS 1998, Bangalore Dated: 16.6.1999 sanctioning the Government Guarantee for Rs.1442.00 crores on behalf of the KSCA & RD Bank for the years 1999-2000 to 2001-02.
(5) Govt. letter No. FD 51 INV 2003, Dated: 24.5.2004 and letter even No. Dated: 7.6.2004 extending the period of the guarantee up to 31.3.2005 for Rs.1325 crores.
(6) Proposal No. FS/DEB/248/2004-05, dated: 24.9.2004 of the KSCA&RD Bank, Addressed to this office requesting to issue of orders for the floatation of the debentures approved by the NABARD as cited in Ref.2 above.

**PREAMBLE:**

The Karnataka State Co-operative Agriculture and Rural Development Bank Ltd., in its letter cited (1) has forwarded a proposal to the National Bank for Agriculture and Rural Development, Bangalore for floatation of Special Development Debentures under Various schemes for Rs.7,05,62,000/- and has requested them for their approval. On considering the proposal of the KARNATAKA STATE CO-OPERATIVE AGRICULTURE AND RURAL DEVELOPMENT BANK cited above at (1) the National Bank for Agriculture and Rural Development, Bangalore in their letter cited above at (2) has conveyed their approval for the floatation and agreed to subscribe to Special Development Debentures floated by the Bank to the extent of Rs.6,47,79,000/-. The contribution from State Government and Central Government is to the extent of Rs.28,91,500/- each. Government in its O.M. cited above at (3) has prescribed the terms and conditions to be imposed by Government while guaranteeing the debentures to be floated by any institution. In the Government guarantee on behalf of the Karnataka State Co-operative Agriculture

and Rural Development Bank for the years 1999-2000 to 2001-2002, Government has authorised the Registrar of Co-operative Societies to issue order etc., up to Rs.10.00 crore on each occasion, and to make the contribution to the debentures according to the pattern approved by the NABARD. The Govt. has further extended the period of said guarantee up to 31.3.2005 vide Government letter cited (5) above. All the relevant terms and conditions applicable to the Karnataka State Co-operative Agriculture and Rural Development Bank as per references cited above at (3) to (5) are to be followed. The Karnataka State Co-operative Agriculture and Rural Development Bank, in its letter cited at (6) has requested this office for issue of order for floatation of debentures as approved by the National Bank for Agriculture and Rural Development vide reference cited above at (2).

**ORDER**

1. Registrar of Co-operative Societies in Karnataka, Bangalore, hereby permits the Karnataka State Co-operative Agriculture and Rural Development Bank Ltd., Bangalore to float Special Development Debentures to the extent of Rs.7,05,62,000/- (Rupees Seven Crores Five Lakhs Sixty two Thousand Only) limiting the amount of debentures to the value of accumulated un-encumbered mortgages secured for implementing the National Bank for Agriculture and Rural Development Scheme, as per the details indicated hereunder, subject to the terms and conditions stipulated in the **ANNEXURE-1** to this order.
2. Sanction is hereby accorded to contribute a sum of Rs.28,91,500/- (Rupees Twenty eight Lakhs Ninetyone Thousand Five Hundred only) being the State Government share of contribution to the various Special Development Debentures to be floated by the Karnataka State Co-operative Agriculture and Rural Development Bank Ltd., Bangalore as approved by the National Bank for Agriculture and Rural Development vide their letter cited above at (2).
3. The currency for floating these debentures would be up to 31.10.2004.
4. General Manager and Manager of the Karnataka State Co-operative Agriculture and Rural Development Bank are authorised jointly to draw the amount on a payees receipt duly countersigned by the Additional Registrar of co-operative Societies (ADM & DEV), Head Office, Bangalore.

The expenditure of Rs.28,91,500/- (Rupees Twentyeight Lakhs Ninetyone Thousand Five Hundred only) in this behalf towards Government contribution may be met under the budget Head "6416-Loans for Agricultural Financial Institutions-190 Loans to public sector and other undertakings-1 Karnataka State Co-operative Agriculture and Rural Development Bank-01 Loans for purchase of debentures." (6416-00-190-1-01)

P.R. 1449 Registrar of Co-operative Societies in Karnataka, Bangalore.

**ನಗರ ಯೋಜನಾ ಇಲಾಖೆ**

**ನಿರ್ದೇಶಕರು, ನಗರ ಯೋಜನಾ ಇಲಾಖೆ, ಬಹುಮಹಡಿಗಳ ಕಟ್ಟಡ, 4ನೇ ಹಂತ, ಬೆಂಗಳೂರು-1**

**ಅಧಿಸೂಚನೆ ಸಂಖ್ಯೆ: ನಯೋ(ಸಿ1):11:ಬ್ಯಾಹುಭ:2004, ದಿನಾಂಕ: 1ನೇ ಅಕ್ಟೋಬರ್ 2004**

ನಗರ ಯೋಜನಾ ಇಲಾಖೆಯಲ್ಲಿ ಬಾಕಿ ಇರುವ ಒಂದು ಪರಿಶಿಷ್ಟ ಪಂಗಡದ ಪ್ರಥಮ ದರ್ಜೆ ಸಹಾಯಕರ ಬ್ಯಾಕ್‌ಲಾಗ್ ಹುದ್ದೆಯ ಭರ್ತಿ ಕುರಿತು ಈ ಕಛೇರಿಯ ಸಮಸಂಖ್ಯೆಯ ಅಧಿಸೂಚನೆ ದಿನಾಂಕ: 15.7.2004 ರಲ್ಲಿ 30 ದಿನಗಳ ಅವಧಿ ನೀಡಿ ಆಕ್ಷೇಪಣೆಗಳನ್ನು ಆಹ್ವಾನಿಸಿ, ತಾತ್ಕಾಲಿಕ ಆಯ್ಕೆ ಪಟ್ಟಿ ಪ್ರಕಟಿಸಲಾಗಿತ್ತು, ಪ್ರಕಟಿಸಿದ ತಾತ್ಕಾಲಿಕ ಆಯ್ಕೆ ಪಟ್ಟಿಗೆ ಯಾವುದೇ ಆಕ್ಷೇಪಣೆ ಸ್ವೀಕೃತವಾಗಿರುವುದಿಲ್ಲ. ಆದ್ದರಿಂದ ಪ್ರಥಮ ದರ್ಜೆ ಸಹಾಯಕರ ಒಂದು ಬ್ಯಾಕ್‌ಲಾಗ್ ಹುದ್ದೆಯ ಅಂತಿಮ ಅಭ್ಯರ್ಥಿಯ ಆಯ್ಕೆಪಟ್ಟಿಯನ್ನು ಕರ್ನಾಟಕ ಸಿವಿಲ್ ಸೇವೆಗಳು (ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡ ಅಭ್ಯರ್ಥಿಗಳಿಗೆ ಮೀಸಲಾಗಿರುವ ಖಾಲಿ ಹುದ್ದೆಗಳು) (ವಿಶೇಷ ನೇಮಕಾತಿ) ನಿಯಮಗಳು, 2001ರ ನಿಯಮ 6 ರನ್ವಯ ಪ್ರಕಟಿಸಲಾಗಿದೆ.

| ಕ್ರ.ಸಂ. | ಅಭ್ಯರ್ಥಿಗಳ ಹೆಸರು ಮತ್ತು ವಿಳಾಸ | ಜನ್ಮ ದಿನಾಂಕ | ವಿದ್ಯಾರ್ಹತೆ | ಸರಾಸರಿ ಅಂಕ | ಮೀಸಲಾತಿ |
|---|---|---|---|---|---|
| | **ಮುಖ್ಯ ಪಟ್ಟಿ** | | | | |
| 1 | ಶ್ರೀ ಡಿ. ರಾಜಕುಮಾರ್, ಹಂದರಕಿ ಅಂಚೆ, ಸೇಡಂ, ಗುಲ್ಬರ್ಗ ಜಿಲ್ಲೆ. | 01.01.75 | ಬಿ.ಎಸ್ಸಿ | 59.18 | ಪರಿಶಿಷ್ಟ ಪಂಗಡ |
| | **ಹೆಚ್ಚುವರಿ ಪಟ್ಟಿ** | | | | |
| 1 | ಶ್ರೀ ಎಸ್. ಪಾಲಣ್ಣ ಬಿನ್ ಸಣ್ಣಪಾಲಯ್ಯ, ಕಾಲುವೆ ಹಳ್ಳಿ, ಯಾದಲಗಟ್ಟೆ ಅಂಚೆ, ಚಳ್ಳಕೆರೆ ತಾಲ್ಲೂಕು, ಚಿತ್ರದುರ್ಗ ಜಿಲ್ಲೆ - 577 522. | 23.05.71 | ಬಿ.ಎ. | 59.00 | ಪರಿಶಿಷ್ಟ ಪಂಗಡ |

**ವಿ.ಎಂ. ಹೆಗಡೆ**

ಪಿ.ಆರ್. 1450 ನಗರ ಯೋಜನಾ ನಿರ್ದೇಶಕರು.

**ಪ್ರಾಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ವಿಜಾಪೂರ ಜಿಲ್ಲೆ, ವಿಜಾಪೂರ ಇವರ ನ್ಯಾಯಾಲಯದಲ್ಲಿ ಯಾರಿಗೆ ಸಂಬಂಧಿಸಿದೆಯೋ ಅಂಥವರಿಗೆ**

ಪಿ.ಎಸ್.ಐ. ತಿಕೋಟಾ ಠಾಣೆ ಇವರ ಪೊಲೀಸ್ ಠಾಣೆ ಗುನ್ನೆ ಸಂಖ್ಯೆ: 150:01, ದಿನಾಂಕ: 3.11.2001 ರಂದು ಮುಂಜಾನೆ 9.00 ಗಂಟೆಗೆ ಮಲನಕನದೇವರಹಟ್ಟಿ - ದಂದರಗಿ ಕ್ರಾಸ್ ಮೇಲೆ ರೋಡ್ ವಾಚ್ ಮಾಡುತ್ತಿದ್ದಾಗ 15 ಲೀಟರ್‌ನಷ್ಟು ಕಳ್ಳಭಟ್ಟಿ ಸಾರಾಯಿಯನ್ನು ಮೋಟಾರ್ ಸೈಕಲ್ ಬಾಕ್ಸರ್ ಬಜಾಜ್ ನೋಂದಣಿ ನಂಬರ್: ಎಂಎಚ್:10:ಯು:9751, ಚಾಸಿಸ್ ನಂಬರ್: ಡಿಎಫ್‌ಎಫ್‌ಬಿಜಿಎಫ್ 97142, ಇಂಜಿನ್ ನಂಬರ್: ಬಿಐಎಂಬಿಜಿಎಫ್ 10143 ಇದ್ದ ಈ ವಾಹನವನ್ನು ಜಪ್ತು ಮಾಡಿ ಪ್ರಥಮ ವರ್ತಮಾನ ವರದಿ ನಂ: 150:2001 ರಂತೆ ಈ ಪ್ರಾಧಿಕಾರಕ್ಕೆ ವರದಿಯನ್ನು ಸಲ್ಲಿಸಿದ್ದು ಇರುತ್ತದೆ.

ಈ ಮೊಕದ್ದಮೆಯಲ್ಲಿ ಜಪ್ತು ಮಾಡಿದ ವಾಹನದ ಮಾಲೀಕರು ಜಪ್ತು ಮಾಡಿದ 15 ಲೀ. ಕಳ್ಳಭಟ್ಟಿ ಸಾರಾಯಿ ಹಾಗೂ ವಾಹನದ ಬಗ್ಗೆ ಮಾಲೀಕತ್ವವನ್ನು ನಿರೂಪಿಸಲು ಸಂಬಂಧಿಸಿದ ದಾಖಲೆಗಳನ್ನು ರಾಜ್ಯ ಸರ್ಕಾರದ ಪತ್ರಾಂಕಿತ ಪತ್ರದಲ್ಲಿ ಪ್ರಕಟಣೆ ಆದ ದಿನಾಂಕದಿಂದ 15 ದಿನಗಳ ಒಳಗೆ ನಿರೂಪಿಸತಕ್ಕದ್ದು.

ಹಾಗೊಂದು ವೇಳೆ ನಿಗದಿತ ಅವಧಿಯೊಳಗೆ ಯಾರೇ ಆಗಲಿ ಮುಂದೆ ಬಂದು ತಮ್ಮ ಹಕ್ಕನ್ನು ಜಪ್ತು ಮಾಡಿದ ಮುದ್ದೇಮಾಲು ಹಾಗೂ ವಾಹನದ ಮೇಲೆ ಸ್ಥಾಪಿಸದಿದ್ದಲ್ಲಿ ಜಪ್ತು ಮಾಡಿದ ವಾಹನವನ್ನು ಕರ್ನಾಟಕ ರಾಜ್ಯ ಅಬಕಾರಿ ಕಾಯ್ದೆ 1965ರ ಕಲಂ 43(ಎ) ಮತ್ತು 43(ಸಿ) ರಂತೆ ಮುಟ್ಟುಗೋಲು ಹಾಕಿಕೊಳ್ಳಲು ಕ್ರಮ ಕೈಕೊಳ್ಳಲಾಗುವುದು. ತಡವಾಗಿ ಬಂದ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲಾ.

ಈ ಪ್ರಕಟಣೆಯನ್ನು ದಿನಾಂಕ: 08.10.2004 ರಂದು ನನ್ನ ಸಹಿ ಮತ್ತು ಮೊಹರು ಹಾಕಿ ನೀಡಲಾಗಿದೆ.

**ಕೆ.ಆರ್. ಗೋವಿಂದಶೆಟ್ಟಿ**

ಪಿ.ಆರ್. 1451 ಪ್ರಾಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ವಿಜಾಪೂರ ಜಿಲ್ಲೆ.

**ಅಧಿಕೃತ ಅಧಿಕಾರಿ ಹಾಗೂ ಅಬಕಾರಿ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ಕೊಡಗು ಜಿಲ್ಲೆ, ಮಡಿಕೇರಿ ಇವರ ನ್ಯಾಯಾಲಯದಲ್ಲಿ**

**ಸಂಖ್ಯೆ: ಇಎಕ್ಸ್‌ಇ:3:ಡಿಟಿಸಿಆರ್‌ಎಂ:158/2003-04, ದಿನಾಂಕ: 8ನೇ ಆಗಸ್ಟ್ 2004**

**ಉಪಸ್ಥಿತರು:** ಶ್ರೀ ಮಹಮದ್ ಇಲಿಯಾಸ್ ಅಹಮದ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ಕೊಡಗು ಜಿಲ್ಲೆ, ಮಡಿಕೇರಿ.

**ಫಿರ್ಯಾದುದಾರರು:** ಆರಕ್ಷಕ ಉಪ ನಿರೀಕ್ಷಕರು, ಕುಶಾಲನಗರ ಠಾಣೆ.

**ಆರೋಪಿಗಳು:** ನಂದ ಕುಮಾರ್ ಮತ್ತು ಇತರರು.

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ: 13.9.2003 ರಂದು ಕುಶಾಲನಗರ ಪೊಲೀಸ್‌ನವರು ಕರ್ತವ್ಯದ ಮೇಲೆ ಕುಶಾಲನಗರ ಮೈಸೂರು ಜಿಲ್ಲೆಯ ಗಡಿಯಾದ ಕೊಪ್ಪಗೇಟ್‌ನ ಚೆಕ್ ಪೋಸ್ಟಿನಲ್ಲಿ ಜೀಪು ನಿಲ್ಲಿಸಿಕೊಂಡು ವಾಹನವನ್ನು ತಪಾಸಣೆ ಮಾಡುತ್ತಿರುವಾಗ ಕೊಪ್ಪದ ಕಡೆಯಿಂದ ಒಂದು ಬಿಳಿಯ ಅಂಬಾಸಿಡರ್ ಕಾರ್ ನಂ.ಸಿಎನ್‌ಎ-1299ರ ಕಾರು ಬರುತ್ತಿದ್ದು, ನಿಲ್ಲಿಸದೆ ಕಾರನ್ನು ಓಡಿಸಿಕೊಂಡು ಕುಶಾಲನಗರ ಟೌನ್ ಕಡೆಗೆ ಹೊರಟು ಹೋದನು. ಆಗ ಸಂಶಯದಿಂದ ಜೀಪನ್ನು ಹಿಂಬಾಲಿಸಿಕೊಂಡು ಹೋಗಿ ಮಡಿಕೇರಿ ರಸ್ತೆಯ ಗುಡ್ಡೆಹೊಸೂರು ಜಂಕ್ಷನ್ ಬಳಿ ಕಾರನ್ನು ಬೆನ್ನಟ್ಟಿ ತಡೆದು ನಿಲ್ಲಿಸಿ ಕಾರನ್ನು ಪರಿಶೀಲಿಸಿದಾಗ ಕಾರಿನ ಹಿಂಭಾಗದ ಸೀಟಿನಲ್ಲಿ ಮತ್ತು ಕಾರಿನ ಡಿಕ್ಕಿಯ ಒಳಗಡೆ ಪ್ಲಾಸ್ಟಿಕ್ ಚೀಲಗಳಲ್ಲಿ ಸಾರಾಯಿ ಪ್ಯಾಕೇಟುಗಳನ್ನು ತುಂಬಿಸಿರುವುದು ಕಂಡು ಬಂದಿದ್ದು, ಸದ್ರಿ ಚಾಲಕನ ಹೆಸರು ವಿಳಾಸ ಕೇಳಿದಾಗ ತಾನು ನಂದ ಕುಮಾರ್, ತಂದೆ ಜೋಯಪ್ಪ, 4ನೇ ಬ್ಲಾಕ್, ಕುಶಾಲನಗರ ಎಂದು ಸದ್ರಿ ಸಾರಾಯಿ ಪ್ಯಾಕೇಟುಗಳನ್ನು ಸಾಗಿಸುವ ಬಗ್ಗೆ ರಹದಾರಿ ಪತ್ರ ಕೇಳಲಾಗಿ ಯಾವುದೂ ಇಲ್ಲ, ತಾನು ಕಾರಿನ ಮಾಲಿಕ ಮತ್ತು ಚಾಲಕ ಕಾರನ್ನು ಬಾಡಿಗೆಗೆ ಒಪ್ಪಿ ಸಿಂಕೋನ ಎಸ್ಟೇಟ್‌ಗೆ ಸಾಗಿಸುತ್ತಿರುವುದಾಗಿ ಹಾಗೂ ಸದರಿ ಸಾರಾಯಿ ಪ್ಯಾಕೇಟುಗಳನ್ನು ರಮೇಶ ಎಂಬುವವರ ಕಡೆಯವರಾದ ಗೋವಿಂದ ಎಂಬುವವರು ಈ ಕಾರಿಗೆ ಸದರಿ 14 ಪ್ಲಾಸ್ಟಿಕ್ ಚೀಲಗಳಲ್ಲಿ ಒಂದೊಂದರಲ್ಲಿಯೂ ತಲಾ 250 ಸಾರಾಯಿ ಪ್ಯಾಕೇಟುಗಳಂತೆ ತುಂಬಿಸಿರುವರು. ಸದರಿಯವರು ಸಿಂಕೋನ ಎಸ್ಟೇಟಿಗೆ ಸಾಗಿಸುವಂತೆ ರೂ.1000ಕ್ಕೆ ಬಾಡಿಗೆಗೆ ಒಪ್ಪಿ ಹೋಗಿರುತ್ತೇನೆ. ಸದರಿ ಸಾರಾಯಿ ಸಾಗಾಣಿಕೆ ಮಾಡಲು ಯಾವುದೇ ರಹದಾರಿ ತನ್ನ ಹತ್ತಿರ ಇಲ್ಲವೆಂದು ತಿಳಿಸಿದ ಮೇಲೆ ತಲಾ ಒಂದೊಂದು ಚೀಲದಲ್ಲೂ 2 ಪ್ಯಾಕೇಟುಗಳನ್ನು ಸ್ಯಾಂಪಲ್‌ಗಾಗಿ ತೆಗೆದು, ಬಿಳಿ ಬಟ್ಟೆಯಿಂದ ಸುತ್ತಿ, ಸೀಲು ಮಾಡಲಾಯಿತು. ಸದರಿ ಸಾರಾಯಿ ಪ್ಯಾಕೇಟಿನ ಮೇಲೆ ಮೈಸೂರು ಸಕ್ಕರೆ ಕಂ. ಲಿ., ಕೊಡಗು ಜಿಲ್ಲೆ ಎಂದು ಮೊಹರು ಇರುವುದಾಗಿದ್ದು, ನಂತರ ಮಹಜರನ್ನು ತಯಾರಿಸಿ ಕರ್ನಾಟಕ ಅಬಕಾರಿ ಕಾಯ್ದೆ ಕಲಂ 14, 13, 34, 32, 43(ಎ) ಪ್ರಕಾರ ಮೊಕದ್ದಮೆಯನ್ನು ದಾಖಲು ಮಾಡಿಕೊಂಡು ಅಬಕಾರಿ ಉಪ ನಿರೀಕ್ಷಕರು, ಕುಶಾಲನಗರ ಉಪ ವಲಯ ರವರಿಗೆ ಹಸ್ತಾಂತರಿಸಿರುತ್ತಾರೆ.

ಸದರಿ ಪ್ರಕರಣದಲ್ಲಿನ ಕಡತವನ್ನು ಈ ಪ್ರಾಧಿಕಾರ ಕೂಲಂಕುಷವಾಗಿ ಪರಿಶೀಲಿಸಿದಾಗ ವಾಹನದ ಮಾಲೀಕರು ಅವರಿಗೆ ತಿಳಿದೇ ಸದರಿ ವಾಹನವನ್ನು ಅಕ್ರಮ ಸಾರಾಯಿ ಪ್ಯಾಕೇಟು ಸಾಗಾಣಿಕೆಗೆ ಬಳಸಿರುವುದು ಮೇಲ್ನೋಟಕ್ಕೆ ಕಂಡು ಬಂದ ಕಾರಣ ಸದರಿ ವಾಹನವನ್ನು ಹಾಗೂ 3472 X 100 ಎಂ.ಎಲ್.ನ ಸಾರಾಯಿ ಪ್ಯಾಕೇಟುಗಳನ್ನು ಕರ್ನಾಟಕ ರಾಜ್ಯ ಅಬಕಾರಿ ಕಾಯ್ದೆ 1965ರ ಕಲಂ 43ರ ಪ್ರಕಾರ ಏಕೆ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂದು ಕರ್ನಾಟಕ ರಾಜ್ಯ ಅಬಕಾರಿ ಕಾಯ್ದೆ 1965ರ ಕಲಂ 43(ಬಿ)ರ ಪ್ರಕಾರ ವಾಹನದ ಮಾಲೀಕರಿಗೆ ಕಾರಣ ಕೇಳಿಕೆ ನೋಟೀಸನ್ನು ದಿನಾಂಕ: 8.8.2004 ರಂದು ಜಾರಿ ಮಾಡಿ ಏಳು ದಿನಗಳೊಳಗಾಗಿ ಸೂಕ್ತ ಸಮಜಾಯಿಸಿಕೆಯನ್ನು ಸಲ್ಲಿಸುವಂತೆ ಮಾಲೀಕರಿಗೆ ನೋಟೀಸ್ ನೀಡಲಾಗಿತ್ತು.

ಸದರಿ ಕಾರಣ ಕೇಳುವ ನೋಟೀಸನ ಬಗ್ಗೆ ಶ್ರೀ ನಂದಕುಮಾರ್, ತಂದೆ ಜೋಯಪ್ಪ, 4ನೇ ಬ್ಲಾಕ್, ಕುಶಾಲನಗರ ಇವರು ಲಿಖಿತ ಅರ್ಜಿಯನ್ನು ಸಲ್ಲಿಸಿ ತಾನು ಸದರಿ ಪ್ರಕರಣದಲ್ಲಿ ವಶಪಡಿಸಿಕೊಂಡ ಅಂಬಾಸಿಡರ್ ಕಾರ್ ನಂ: ಸಿಎನ್‌ಎ-1299ರ ಅಧಿಕೃತ ಮಾಲೀಕರಾಗಿದ್ದು, ತನ್ನ ವಾಹನವನ್ನು ನಾನು ಬಾಡಿಗೆ ಹೋದ ಸಮಯದಲ್ಲಿ ನನಗೆ ಕಾನೂನಿನ ಅರಿವಿಲ್ಲದೆ ಸಾರಾಯಿ ಪ್ಯಾಕೇಟುಗಳನ್ನು

ಸಾಗಾಣಿಕೆ ಮಾಡಿದ್ದು, ಅಬಕಾರಿ ಕಾಯ್ದೆಯನ್ನು ಉಲ್ಲಂಘನೆ ಮಾಡಿರುತ್ತೇನೆ. ಈ ಕಾರಣಗಳಿಂದ ಸದರಿ ವಾಹನವನ್ನು ಇಲಾಖಾ ಅಧಿಕಾರಿಗಳು ಸ್ವಾಧೀನ ಪಡಿಸಿಕೊಂಡು ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ರವರ ಘನ ನ್ಯಾಯಾಲಯದ ಮುಂದೆ ಹಾಜರು ಪಡಿಸಿರುತ್ತಾರೆ.

ಆದುದರಿಂದ ಈಗ ನನ್ನ ಆರ್ಥಿಕ ಸ್ಥಿತಿ ಸರಿಯಿಲ್ಲದ ಕಾರಣ ವಕೀಲರನ್ನು ನೇಮಿಸಿ ಮೊಕದ್ದಮೆಯನ್ನು ನಡೆಸಿಕೊಂಡು ಹೋಗಲು ಶಕ್ತನಲ್ಲ. ಆದ ಕಾರಣ ಈ ಅಪರಾಧವನ್ನು ಮನ್ನಿಸಿ ಸದರಿ ವಾಹನವನ್ನು ತಾವು ಇಲಾಖೆ ಮೂಲಕ ಕಾನೂನು ರೀತಿ ವಿಲೇ ಮಾಡಲು ನನ್ನ ಅಭ್ಯಂತರವಿಲ್ಲ ಹಾಗೂ ಈ ಪ್ರಾಧಿಕಾರ ನೀಡುವ ಆದೇಶಕ್ಕೆ ಬದ್ಧನಾಗಿರುತ್ತೇನೆ ಎಂದು ಲಿಖಿತ ಮೂಲಕ ವಿನಂತಿಸಿಕೊಂಡಿರುತ್ತಾರೆ.

ಸದರಿ ಪ್ರಕರಣದಲ್ಲಿ ವಶ ಪಡಿಸಿಕೊಂಡ ಸಾರಾಯಿ ಪ್ಯಾಕೇಟಿನಿಂದ ಮಾದರಿ ತೆಗೆದು ರಾಸಾಯನಿಕ ತಜ್ಞರಲ್ಲಿಗೆ ಕಳಿಸಲಾಗಿದ್ದು, ಸದರಿ ದ್ರವವು ಸಾರಾಯಿ ಎಂದು ದೃಢೀಕರಿಸಿರುವುದರಿಂದ ಹಾಗೂ ಸಾರಾಯಿ ಎಂದು ಸಾಬೀತಾಗಿರುವುದರಿಂದ ಈ ಕಛೇರಿಯ ಆದೇಶ ಸಂಖ್ಯೆ: 200/2003-04, ದಿನಾಂಕ: 8.8.2004 ರಂತೆ ಈ ಮೊಕದ್ದಮೆಯಲ್ಲಿ ವಶಪಡಿಸಿಕೊಂಡ 347.200 ಲೀಟರ್ ಸಾರಾಯಿಯನ್ನು ಮುಟ್ಟುಗೋಲು ಹಾಕಿಕೊಳ್ಳಲಾಗಿದೆ. ಆದುದರಿಂದ ಸದರಿ ವಾಹನವನ್ನು ಅಬಕಾರಿ ಕಾಯ್ದೆಗೆ ವಿರೋಧವಾಗಿರುವ ಕೃತ್ಯಕ್ಕೆ ಬಳಸಿರುವುದು ಈ ಪ್ರಾಧಿಕಾರದಲ್ಲಿ ಮೇಲ್ನೋಟಕ್ಕೆ ಸಾಬೀತು ಆಗಿರುವುದರಿಂದ ಈ ಪ್ರಕರಣದಲ್ಲಿ ವಶಪಡಿಸಿಕೊಂಡ ಅಂಬಾಸಿಡರ್ ಕಾರ್ ನಂ: ಸಿಎನ್‌ಎ-1299ರ ಮಾಲೀಕರು ಸದರಿ ಪ್ರಕರಣವನ್ನು ಈ ಪ್ರಾಧಿಕಾರದ ಮುಂದೆ ನಡೆಸಲು ಶಕ್ತನಲ್ಲದ ಕಾರಣ ಹಾಗೂ ಸದರಿ ವಾಹನದ ಬಗ್ಗೆ ಈ ಪ್ರಾಧಿಕಾರ ಕಾನೂನು ಪ್ರಕಾರ ಕೈಗೊಳ್ಳುವ ಕ್ರಮಕ್ಕೆ ತನ್ನದೇನೂ ಅಭ್ಯಂತರವಿಲ್ಲವೆಂದು ಲಿಖಿತ ಮೂಲಕ ವಿನಂತಿಸಿ ಕೊಂಡಿರುವುದರಿಂದ ಹಾಗೂ ವಾಹನದ ಬಗ್ಗೆ ಮುಂದೆ ಯಾರು ಹಕ್ಕು ಚಲಾಯಿಸದೇ ಇರುವ ಕಾರಣ ಮತ್ತು ಸದರಿ ವಾಹನದಲ್ಲಿ ಅಕ್ರಮ ಸಾರಾಯಿ ಪ್ಯಾಕೇಟುಗಳನ್ನು ಅಧಿಕೃತವಾಗಿಯೇ ಸಾಗಾಣಿಕೆ ಮಾಡಲಾಗುತ್ತಿತ್ತು ಎಂಬುದನ್ನು ವಾಹನದ ಮಾಲೀಕರಾಗಲೀ, ಈ ಪ್ರಕರಣದಲ್ಲಿನ ಆರೋಪಿಗಳಾಗಲೀ ಸಾಕ್ಷ್ಯಾಧಾರಗಳೊಂದಿಗೆ ಸಾಬೀತು ಪಡಿಸಲು ವಿಫಲರಾಗಿರುವುದರಿಂದ ಸದರಿ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಈ ಪ್ರಾಧಿಕಾರ ಅಭಿಪ್ರಾಯ ಪಟ್ಟಿದೆ.

ಆದುದರಿಂದ ಈ ಕೆಳಗಿನಂತೆ ಆದೇಶ.

**ಆದೇಶ ಸಂಖ್ಯೆ: ಇಎಕ್ಸ್‌ಇ:3:ಡಿಟಿಸಿಆರ್‌ಎಂ:200/2003-04, ದಿನಾಂಕ: 8ನೇ ಆಗಸ್ಟ್ 2004**

ಈ ಪ್ರಕರಣದ ಮುಖ್ಯಾಂಶದಲ್ಲಿ ವಿವರಿಸಲಾದ ಸನ್ನಿವೇಶದಂತೆ ಮಹಮದ್ ಇಲಿಯಾಸ್ ಅಹಮದ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಕೊಡಗು ಜಿಲ್ಲೆ, ಮಡಿಕೇರಿ ಆದ ನಾನು ಕರ್ನಾಟಕ ರಾಜ್ಯ ಅಬಕಾರಿ ಕಾಯ್ದೆ 1965ರ ಕಲಂ 43(ಎ)ರ ಅಡಿಯಲ್ಲಿ ಸರ್ಕಾರದಿಂದ ದತ್ತವಾದ ಅಧಿಕಾರವನ್ನು ಚಲಾಯಿಸಿ ಕಲಂ 43(ಬಿ)ರ ಅಡಿಯಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿದ ನಂತರ ಪೊಲೀಸ್ ಉಪ ನಿರೀಕ್ಷಕರು, ಕುಶಾಲನಗರ ಠಾಣೆ ಇವರ ಮೊ.ಸಂ.115/03, ದಿನಾಂಕ: 3.9.2003 ರಲ್ಲಿ ಸ್ವಾಧೀನ ಪಡಿಸಿಕೊಂಡ ಅಂಬಾಸಿಡರ್ ಕಾರ್ ನಂ: ಸಿಎನ್‌ಎ-1299 ರನ್ನು ಕರ್ನಾಟಕ ಅಬಕಾರಿ ಕಾಯ್ದೆ ಕಲಂ 43 (ಎ) (2)ರ ಅನ್ವಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ. ಈ ಆದೇಶವನ್ನು ಇಂದು ಅಂದರೆ ದಿನಾಂಕ: 8.8.2004 ರಂದು ಶೀಘ್ರಲಿಪಿಗಾರರಿಗೆ ಉಕ್ತಲೇಖನ ಕೊಟ್ಟು ಬೆರಳಚ್ಚು ಮಾಡಿಸಿ ಕಂಪ್ಯೂಟರಿನಲ್ಲಿ ಮುದ್ರಿಸಿ ಪ್ರತಿಯನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು. ಈ ಆದೇಶ ಆದ 30 ದಿನಗಳ ನಂತರ ಮುಟ್ಟುಗೋಲು ಹಾಕಿಕೊಂಡಿರುವ ವಾಹನವನ್ನು ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಕೊಡಗು ಜಿಲ್ಲೆ, ಮಡಿಕೇರಿ ರವರ ಅನುಮೋದನೆಯನ್ನು ಪಡೆದು ಬಹಿರಂಗ ಹರಾಜು ಮೂಲಕ ವಿಲೇವಾರಿ ಮಾಡಲಾಗುವುದು ಎಂದು ಆದೇಶಿಸಿರುತ್ತೇನೆ.

ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್,
ಪಿ.ಆರ್. 1452 ಕೊಡಗು ಜಿಲ್ಲೆ, ಮಡಿಕೇರಿ.

**ಅಧಿಕೃತ ಅಧಿಕಾರಿ ಹಾಗೂ ಅಬಕಾರಿ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ಕೊಡಗು ಜಿಲ್ಲೆ, ಮಡಿಕೇರಿ ಇವರ ನ್ಯಾಯಾಲಯದಲ್ಲಿ**
**ಸಂಖ್ಯೆ: ಇಎಕ್ಸ್‌ಇ:3:ಡಿಟಿಸಿಆರ್‌ಎಂ:94/2003-04, ದಿನಾಂಕ: 5ನೇ ಆಗಸ್ಟ್ 2004**

**ಉಪಸ್ಥಿತರು:** ಶ್ರೀ ಮಹಮದ್ ಇಲಿಯಾಸ್ ಅಹಮದ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಕೊಡಗು ಜಿಲ್ಲೆ, ಮಡಿಕೇರಿ.

**ಫಿರ್ಯಾದುದಾರರು:** ಅಬಕಾರಿ ಉಪ ನಿರೀಕ್ಷಕರು, ಮಡಿಕೇರಿ ಉಪ ವಿಭಾಗ, ಮಡಿಕೇರಿ.

**ಆರೋಪಿಗಳು:** ನೂರೇರ ರವೀಂದ್ರ ತಂದೆ ಎನ್.ಬಿ. ಪಾಪು, ಗೋಣಿಕೊಪ್ಪ.

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ: 27.3.2004 ರಂದು ಮಡಿಕೇರಿ ಉಪ ವಿಭಾಗದ ಅಬಕಾರಿ ಉಪ ನಿರೀಕ್ಷಕರು ಕರ್ತವ್ಯದಲ್ಲಿದ್ದಾಗ ದೊರೆತ ಖಚಿತ ವರ್ತಮಾನದ ಮೇರೆಗೆ ಸದರಿ ಬಾವಲಿ ಗ್ರಾಮದ ಬಸ್ಸು ತಂಗುದಾಣದ ಪಕ್ಕ ವಾಹನ ತಪಾಸಣೆ ನಡೆಸಿಕೊಂಡಿರುವ ಬಗ್ಗೆ ಬಾವಲಿ ಗ್ರಾಮದಿಂದ ಪಾರಾಣೆ ಕಡೆಗೆ ಒಂದು ಬಿಳಿ ಬಣ್ಣದ ಮಾರುತಿ ಕಾರು ಬರುತ್ತಿರುವುದು ಕಂಡು ಬಂದು ಅದನ್ನು ತಡೆದು ನಿಲ್ಲಿಸಿ ನೋಡಲಾಗಿ ಅದರಲ್ಲಿ ಇಬ್ಬರು ವ್ಯಕ್ತಿಗಳು ಇದ್ದು, ಅವರನ್ನು ಹೆಸರು ಕೇಳಲಾಗಿ ನೂರೇರ ರವೀಂದ್ರ, ವಾಹನ ಚಾಲಕನಾಗಿದ್ದು, ಇನ್ನೊಬ್ಬ ತೀಯರ ಮಣಿಕಂಠ ಎಂಬ ವ್ಯಕ್ತಿಗಳಿದ್ದು, ಅವರುಗಳನ್ನು ಮಾರುತಿ ಕಾರಿನಲ್ಲಿ ಏನಿದೆ ಎಂದು ಕೇಳಲಾಗಿ ಸಾರಾಯಿ ಪ್ಯಾಕೇಟುಗಳು ಇರುವುದೆಂದು ತಿಳಿಸಿದರು. ಇದನ್ನು ಹೊಂದಲು ರಹದಾರಿ ಪತ್ರ ಇದೆಯೇ ಎಂದು ಕೇಳಲಾಗಿ ಅಸಲಿ ದಾಖಲಾತಿಗಳು ಇರುವುದಿಲ್ಲ. ನಕಲಿ ದಾಖಲಾತಿಗಳು ಇರುವುದಾಗಿ ತಿಳಿಸಿದರು. ಆದುದರಿಂದ ಮಾರುತಿ 800 ಕಾರ್ ನಂ: ಕೆಎ-03-ಎನ್-2047 ರಲ್ಲಿ ಸಾರಾಯಿ ಪ್ಯಾಕೇಟು ನಾಲ್ಕು ಚೀಲಗಳಲ್ಲಿ ತಲಾ 325 ರಂತೆ ಒಟ್ಟು 1300 ಪ್ಯಾಕೇಟುಗಳು ಇದ್ದುದನ್ನು ವಶಪಡಿಸಿಕೊಂಡು ಮೊ.ಸಂ.33/03-04 ರಂತೆ ಮೊಕದ್ದಮೆಯನ್ನು ದಾಖಲು ಮಾಡಿಕೊಂಡು 1) ನೂರೇರ ರವೀಂದ್ರ 2) ತೀಯರ ಮಣಿಕಂಠ 3) ಸತೀಶ್ ಪೋತರಜ್, ಸಾರಾಯಿ ಕಾಂಟ್ರಾಕ್ಟರ್ ಮೇನೇಜರ್ ವಾಹನ ಸಮೇತ ಪ್ರಕರಣವನ್ನು ದಾಖಲು ಮಾಡಿಕೊಂಡು ಮುಂದಿನ ಕ್ರಮಕ್ಕೋಸ್ಕರ ಅಬಕಾರಿ ಉಪ ನಿರೀಕ್ಷಕರು, ಉಪ ವಲಯ, ಮಡಿಕೇರಿ ಇವರಿಗೆ ಹಸ್ತಾಂತರಿಸಿರುತ್ತಾರೆ.

ಈ ಪ್ರಕರಣದಲ್ಲಿನ ಕಡತವನ್ನು ಈ ಪ್ರಾಧಿಕಾರ ಕೂಲಂಕುಷವಾಗಿ ಪರಿಶೀಲಿಸಿದಾಗ ವಾಹನದ ಮಾಲೀಕರು ಅವರಿಗೆ ತಿಳಿದೇ ಸದರಿ ವಾಹನವನ್ನು ಅಕ್ರಮ ಸಾರಾಯಿ ಪ್ಯಾಕೇಟುಗಳ ಸಾಗಾಣಿಕೆಗೆ ಬಳಸಿರುವುದು ಮೇಲ್ನೋಟಕ್ಕೆ ಕಂಡು ಬಂದ ಕಾರಣ ಸದರಿ ವಾಹನವನ್ನು, 100 ಎಂ.ಎಲ್.ನ ಸಾರಾಯಿ ಪ್ಯಾಕೇಟುಗಳನ್ನು ಕರ್ನಾಟಕ ರಾಜ್ಯ ಅಬಕಾರಿ ಕಾಯ್ದೆ 1965ರ ಕಲಂ 43(ಬಿ)ರ ಪ್ರಕಾರ ವಾಹನದ ಮಾಲೀಕರಿಗೆ ಕಾರಣ ಕೇಳಿಕೆ ನೋಟೀಸನ್ನು ದಿನಾಂಕ: 4.6.2004 ರಂದು ಜಾರಿ ಮಾಡಿ ಏಳು ದಿನಗಳೊಳಗಾಗಿ ಸೂಕ್ತ ಸಮಜಾಯಿಸಿಕೆಯನ್ನು ಸಲ್ಲಿಸುವಂತೆ ಮಾಲೀಕರಿಗೆ ನೋಟೀಸ್ ನೀಡಲಾಗಿತ್ತು.

ಸದರಿ ಕಾರಣ ಕೇಳಿ ನೋಟೀಸ್ ಬಗ್ಗೆ ಶ್ರೀ ಎನ್.ಪಿ. ರವೀಂದ್ರ ತಂದೆ ಎನ್.ಬಿ. ಪಾಪು, ಕ್ಲಾಸಿಕ್ ಹೋಟೇಲ್ ಹಿಂಭಾಗ, ಪೊನ್ನಂಪೇಟೆ ಜಂಕ್ಷನ್, ಗೋಣಿಕೊಪ್ಪ, ಕೊಡಗು ಇವರು ಅರ್ಜಿಯನ್ನು ಸಲ್ಲಿಸಿ ತಾನು ಸದರಿ ಪ್ರಕರಣದಲ್ಲಿ ವಶಪಡಿಸಿಕೊಂಡ ಮಾರುತಿ 800 ಕಾರ್ ನಂ: ಕೆಎ-03-ಎನ್-2047ರ ಅಧಿಕೃತ ಮಾಲೀಕರಾಗಿದ್ದು, ತನ್ನ ವಾಹನವನ್ನು ಅಬಕಾರಿ ಕಾಯ್ದೆಯ ಅರಿವಿಲ್ಲದೆ ಈ ಅಪರಾಧ ನಡೆದಿರುತ್ತದೆ. ಈ ಕಾರಣದಿಂದ ಸದರಿ ವಾಹನವನ್ನು ಇಲಾಖಾ ಅಧಿಕಾರಿಗಳು ಸ್ವಾಧೀನ ಪಡಿಸಿಕೊಂಡು ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ರವರ ಘನ ನ್ಯಾಯಾಲಯದ ಮುಂದೆ ಹಾಜರು ಪಡಿಸಿರುತ್ತಾರೆ.

ಆದುದರಿಂದ ಈಗ ನನ್ನ ಆರ್ಥಿಕ ಸ್ಥಿತಿ ಸರಿಯಿಲ್ಲದ ಕಾರಣ ವಕೀಲರನ್ನು ನೇಮಿಸಿ ಮೊಕದ್ದಮೆಯನ್ನು ನಡೆಸಿಕೊಂಡು ಹೋಗಲು ಶಕ್ತನಲ್ಲ. ಆದ ಕಾರಣ ಈ ಅಪರಾಧವನ್ನು ಮನ್ನಿಸಿ ಸದರಿ ವಾಹನವನ್ನು ತಾವು ಇಲಾಖೆ ಮೂಲಕ ಕಾನೂನು ರೀತಿ ವಿಲೇ ಮಾಡಲು ನನ್ನ ಅಭ್ಯಂತರವಿಲ್ಲ ಹಾಗೂ ಈ ಪ್ರಾಧಿಕಾರ ನೀಡುವ ಆದೇಶಕ್ಕೆ ಬದ್ಧನಾಗಿರುತ್ತೇನೆ ಎಂದು ಲಿಖಿತ ಮೂಲಕ ವಿನಂತಿಸಿಕೊಂಡಿರುತ್ತಾರೆ. ಸದರಿ ಪ್ರಕರಣದಲ್ಲಿ ವಶಪಡಿಸಿಕೊಂಡ ಸಾರಾಯಿ ಪ್ಯಾಕೇಟಿನಿಂದ ರಾಸಾಯನಿಕ ಪರೀಕ್ಷೆಗೆ ಮಾದರಿ ತೆಗೆದು ರಾಸಾಯನಿಕ ತಜ್ಞರು, ಮಂಗಳೂರು ರವರಿಗೆ ಕಳಿಸಲಾಗಿದ್ದು ಸದರಿ ದ್ರವವು ಸಾರಾಯಿ ಎಂದು ದೃಢೀಕರಿಸಿರುವುದರಿಂದ ಹಾಗೂ ಸಾರಾಯಿ ಎಂದು ಸಾಬೀತಾಗಿರುವುದರಿಂದ ಸದರಿ ವಾಹನವನ್ನು ಅಬಕಾರಿ ಕಾಯ್ದೆಗೆ ವಿರೋಧವಾಗಿರುವ ಕೃತ್ಯಕ್ಕೆ ಬಳಸಿರುವುದು ಈ ಪ್ರಾಧಿಕಾರದಲ್ಲಿ ಮೇಲ್ನೋಟಕ್ಕೆ ಸಾಬೀತಾಗಿರುವುದರಿಂದ ಈ ಪ್ರಕರಣದಲ್ಲಿ ವಶಪಡಿಸಿಕೊಂಡ ಮಾರುತಿ 800 ಕಾರ್ ನಂ: ಕೆಎ-03-ಎನ್-2047ರ ಮಾಲೀಕರು ಸದರಿ ಪ್ರಕರಣವನ್ನು ಈ ಪ್ರಾಧಿಕಾರದ ಮುಂದೆ ನಡೆಸಲು ಶಕ್ತನಲ್ಲದ ಕಾರಣ ಹಾಗೂ ಸದರಿ ವಾಹನದ ಬಗ್ಗೆ ಈ ಪ್ರಾಧಿಕಾರ ಕಾನೂನು ಪ್ರಕಾರ ಕೈಗೊಳ್ಳುವ ಕ್ರಮಕ್ಕೆ ತನ್ನದೇನೂ ಅಭ್ಯಂತರವಿಲ್ಲವೆಂದು ಲಿಖಿತ ಮೂಲಕ ವಿನಂತಿಸಿಕೊಂಡಿರುವುದರಿಂದ ಹಾಗೂ ವಾಹನದ ಬಗ್ಗೆ ಮುಂದೆ ಯಾರು ಹಕ್ಕು ಚಲಾಯಿಸದೇ ಇರುವ ಕಾರಣ ಮತ್ತು ಸದರಿ ವಾಹನದಲ್ಲಿ ಅಕ್ರಮ ಸಾರಾಯಿ ಪ್ಯಾಕೇಟುಗಳನ್ನು ಅಧಿಕೃತವಾಗಿಯೇ ಸಾಗಾಣಿಕೆ ಮಾಡಲಾಗುತ್ತಿತ್ತು ಎಂಬುದನ್ನು ವಾಹನದ ಮಾಲೀಕರಾಗಲೀ ಈ ಪ್ರಕರಣದಲ್ಲಿನ ಆರೋಪಿಗಳಾಗಲೀ ಸಾಕ್ಷ್ಯಾಧಾರಗಳೊಂದಿಗೆ ಸಾಬೀತುಪಡಿಸಲು ವಿಫಲರಾಗಿರುವುದರಿಂದ ಸದರಿ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಈ ಪ್ರಾಧಿಕಾರ ಅಭಿಪ್ರಾಯಪಟ್ಟಿದೆ.

ಹಾಗೂ ವಾಹನವನ್ನು ತೆರೆದ ಪ್ರದೇಶದಲ್ಲಿ ನಿಲ್ಲಿಸಿದ್ದು, ಗಾಳಿ ಮಳೆ, ಪ್ರಕೃತಿಯ ವಿಕೋಪಕ್ಕೆ ವಾಹನದ ಬಿಡಿಭಾಗಗಳು ತೀರಾ ತುಕ್ಕು ಹಿಡಿದು ಹಾಳಾಗುವ ಸನ್ನಿವೇಶವಿದ್ದು, ಇದರಿಂದ ಸರ್ಕಾರಕ್ಕೆ ಬರುವಂತಹ ಆದಾಯವು ಕೈತಪ್ಪುವ ಸಾಧ್ಯತೆ ಇರುವುದರಿಂದ ವಾಹನವನ್ನು ಕೂಡಲೇ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವಾಗಿರುತ್ತದೆ. ಆದುದರಿಂದ ಈ ಕೆಳಗಿನಂತೆ ಆದೇಶ.

**ಆದೇಶ ಸಂಖ್ಯೆ: ಇಎಕ್ಸ್‌ಇ:3:ಡಿಟಿಸಿಆರ್‌ಎಂ:199/2004-05, ದಿನಾಂಕ: 5ನೇ ಆಗಸ್ಟ್ 2004**

ಈ ಪ್ರಕರಣದ ಮುಖ್ಯಾಂಶದಲ್ಲಿ ವಿವರಿಸಲಾದ ಸನ್ನಿವೇಶದಂತೆ ಮಹಮದ್ ಇಲಿಯಾಸ್ ಅಹಮದ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಕೊಡಗು ಜಿಲ್ಲೆ, ಮಡಿಕೇರಿ ಆದ ನಾನು ಕರ್ನಾಟಕ ರಾಜ್ಯ ಅಬಕಾರಿ ಕಾಯ್ದೆ 1965ರ ಕಲಂ 43(ಎ)ರ ಅಡಿಯಲ್ಲಿ ಸರ್ಕಾರದಿಂದ ದತ್ತವಾದ ಅಧಿಕಾರವನ್ನು ಚಲಾಯಿಸಿ ಕಲಂ 43(ಬಿ)ರ ಅಡಿಯಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿದ ನಂತರ ಅಬಕಾರಿ ಉಪ ನಿರೀಕ್ಷಕರು, ಉಪ ವಿಭಾಗ, ಮಡಿಕೇರಿ ರವರ ಮೊ.ಸಂ.33/2003-04, ದಿನಾಂಕ: 27.03.2004 ರಲ್ಲಿ ಸ್ವಾಧೀನ ಪಡಿಸಿಕೊಂಡ ಮಾರುತಿ 800 ಕಾರ್ ನಂ: ಕೆಎ-03-ಎನ್-2047 ರನ್ನು ಕರ್ನಾಟಕ ಅಬಕಾರಿ ಕಾಯ್ದೆ ಕಲಂ 43 (ಎ) (2)ರ ಅನ್ವಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ. ಈ ಆದೇಶವನ್ನು ಇಂದು ಅಂದರೆ ದಿನಾಂಕ: 5.8.2004 ರಂದು ಶೀಘ್ರಲಿಪಿಗಾರರಿಗೆ ಉಕ್ತಲೇಖನ ಕೊಟ್ಟು ಬೆರಳಚ್ಚು ಮಾಡಿಸಿ ಕಂಪ್ಯೂಟರಿನಲ್ಲಿ ಮುದ್ರಿಸಿ ಪ್ರತಿಯನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು. ಈ ಆದೇಶ ಆದ 30 ದಿನಗಳ ನಂತರ ಮುಟ್ಟುಗೋಲು ಹಾಕಿಕೊಂಡಿರುವ ವಾಹನವನ್ನು ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಕೊಡಗು ಜಿಲ್ಲೆ, ಮಡಿಕೇರಿ ರವರ ಅನುಮೋದನೆಯನ್ನು ಪಡೆದು ಬಹಿರಂಗ ಹರಾಜು ಮೂಲಕ ವಿಲೇವಾರಿ ಮಾಡಲಾಗುವುದು ಎಂದು ಆದೇಶಿಸಿರುತ್ತೇನೆ.

ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್,
ಕೊಡಗು ಜಿಲ್ಲೆ, ಮಡಿಕೇರಿ.

ಪಿ.ಆರ್. 1453

**ಅಬಕಾರಿ ಇಲಾಖೆ**

**ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ರವರ ಕಛೇರಿ, ಕೊಡಗು ಜಿಲ್ಲೆ, ಮಡಿಕೇರಿ**

**ಪ್ರಕಟಣೆ ಸಂಖ್ಯೆ: ಇಎಕ್ಸ್‌ಇ:3:ಡಿಟಿಸಿಆರ್‌ಎಂ:19/2000-01, ದಿನಾಂಕ: 4ನೇ ಅಕ್ಟೋಬರ್ 2004**

**ವಿಷಯ:** ಕೊಡಗು ಜಿಲ್ಲೆಯಲ್ಲಿನ ಅಬಕಾರಿ ಪ್ರಕರಣದಲ್ಲಿ ವಶಪಡಿಸಿಕೊಂಡ ಮೂರು ವಾಹನಗಳ ವಿಲೇವಾರಿ ಬಗ್ಗೆ.

**ಉಲ್ಲೇಖ:** ಮುಟ್ಟುಗೋಲು ಹಾಕಿಕೊಳ್ಳಬೇಕಾದ ವಾಹನಗಳ ಸಂಖ್ಯೆ

1) ಜೀಪು ನಂ. ಕೆಎ. 14-ಎಂ-1363
2) ಆಟೋ ರಿಕ್ಷಾ ನಂ. ಕೆ.ಎ.12-5026
3) ಆಟೋ ರಿಕ್ಷಾ ನಂ. ಕೆ.ಎ.12-2875
4) ಆಟೋ ರಿಕ್ಷಾ ನಂ. ಕೆ.ಎ.12-1752

ಉಲ್ಲೇಖದಲ್ಲಿ ಹೇಳಲಾದ ವಾಹನಗಳು ಕೊಡಗು ಜಿಲ್ಲೆಯಲ್ಲಿ ಸರ್ಕಾರದ ಪರವಾನಿಗೆ ಇಲ್ಲದೆ ಹಾಗೂ ಕಾನೂನಿಗೆ ವಿರೋಧವಾಗಿ ಅಕ್ರಮ ಸಾರಾಯಿ, ಮದ್ಯ ಸಾರ, ಸ್ವದೇಶಿ ಮದ್ಯಗಳನ್ನು ಸಾಗಾಣಿಕೆ ಮಾಡುತ್ತಿರುವಾಗ ಈ ಕೆಳಕಂಡ ಮೂರು ವಾಹನಗಳ ಮೇಲೆ ಮೊಕದ್ದಮೆಯನ್ನು ದಾಖಲು ಮಾಡಿರುತ್ತಾರೆ.

1) ಜೀಪು ನಂ. ಕೆಎ. 14-ಎಂ-1363
2) ಆಟೋ ರಿಕ್ಷಾ ನಂ. ಕೆ.ಎ.12-5026
3) ಆಟೋ ರಿಕ್ಷಾ ನಂ. ಕೆ.ಎ.12-2875
4) ಆಟೋ ರಿಕ್ಷಾ ನಂ. ಕೆ.ಎ.12-1752

ಸದರಿ ವಾಹನಗಳ ಬಗ್ಗೆ ಮುಂದಿನ ಕ್ರಮ ಕೈಗೊಳ್ಳಲು ಈ ಪ್ರಾಧಿಕಾರದಲ್ಲಿ ಅಬಕಾರಿ ಕಾಯಿದೆ 1965ರ ಕಲಂ 43(ಎ) ಅಡಿಯಲ್ಲಿ ವಿಚಾರಣೆ ನಡೆಸಲು ಸಂಬಂಧಪಟ್ಟ ವಾಹನದ ಮಾಲೀಕರುಗಳಿಗೆ ಅವಕಾಶ ನೀಡಲು ಹಲವಾರು ಬಾರಿ ಸಮನ್ಸ್ ನೀಡಿದರೂ ಸಹ ನೋಂದಣಿಯಾದ ಪತ್ರಗಳು ಈ ಕಛೇರಿಗೆ ವಾಪಸ್ ಬಂದಿರುತ್ತದೆ. ಹಾಗೂ ವಾಹನದ ಮಾಲೀಕರು ಈ ಪ್ರಾಧಿಕಾರದ ಮುಂದೆ ಹಾಜರಾಗಿರುವುದಿಲ್ಲ.

ಆದುದರಿಂದ ಸದರಿ ವಾಹನದ ಮಾಲೀಕರು ಈ ಪ್ರಕಟಣೆ ಹೊರಡಿಸಿದ 15 ದಿವಸಗಳೊಳಗೆ ಈ ಪ್ರಾಧಿಕಾರದ ಮುಂದೆ ಹಾಜರಾಗಿ ಮೊಕದ್ದಮೆಯನ್ನು ನಡೆಸಲು ಸೂಚಿಸಿದೆ ಇಲ್ಲದ ಪಕ್ಷದಲ್ಲಿ ಯಾವುದೇ ಸೂಚನೆ ನೀಡದೆ ಅಬಕಾರಿ ಕಾಯಿದೆ 1965ರ ಕಲಂ 43(ಎ) ಪ್ರಕಾರ ನೇರವಾಗಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.

**ಮಹಮ್ಮದ್ ಇಲಿಯಾಸ್ ಅಹಮದ್**

ಪಿ.ಆರ್. 1455 ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಕೊಡಗು ಜಿಲ್ಲೆ, ಮಡಿಕೇರಿ.

## ಕರ್ನಾಟಕ ಲೋಕಸೇವಾ ಆಯೋಗದ ನಡವಳಿಗಳು

## ಕಾರ್ಯದರ್ಶಿ ಮತ್ತು ನಿಯಂತ್ರಕರು, ಇಲಾಖಾ ಪರೀಕ್ಷೆಗಳು, ಕರ್ನಾಟಕ ಲೋಕಸೇವಾ ಆಯೋಗ

**ವಿಷಯ:** 2004ರ ಪ್ರಥಮ ಅಧಿವೇಶನದ ಇಲಾಖಾ ಪರೀಕ್ಷೆಯ ಕನ್ನಡ ಭಾಷಾ ಲಿಖಿತ ಪರೀಕ್ಷೆಯಲ್ಲಿ ದುರಾಚಾರ ಕುರಿತು.

**ಓದಲಾಗಿದೆ:** 1) ಶ್ರೀ ಖಾದರ್ ಪಾಷ ಇವರ ಇಲಾಖಾ ಪರೀಕ್ಷೆಯ ಅರ್ಜಿ ದಿನಾಂಕ: 14.05.2004.
2) ಶ್ರೀ ಖಾದರ್ ಪಾಷ ಇವರ ಕನ್ನಡ ಭಾಷಾ ಪತ್ರಿಕೆ-1ರ ಉತ್ತರ ಪತ್ರಿಕೆ.
3) ದಿನಾಂಕ: 12.08.2004 ರಂದು ಶ್ರೀ ಖಾದರ್ ಪಾಷ ಇವರಿಗೆ ಕಳುಹಿಸಿದ ಕಾರಣ ಕೇಳುವ ನೋಟೀಸು.

2004ನೇ ಸಾಲಿನ ಪ್ರಥಮ ಅಧಿವೇಶನದ ಇಲಾಖಾ ಪರೀಕ್ಷೆಯ ಕನ್ನಡ ಭಾಷಾ ಪರೀಕ್ಷೆಗೆ ಶ್ರೀ ಖಾದರ್ ಪಾಷ, ಪೇದೆ ಸಂಖ್ಯೆ-171, ಉಪ ಪೊಲೀಸ್ ಅಧೀಕ್ಷಕರ ಕಛೇರಿ, ಪೊಲೀಸ್ ಕೇಂದ್ರಸ್ಥಾನ, ರಾಯಚೂರು-584102 ಇವರು ಅರ್ಜಿಯನ್ನು ಸಲ್ಲಿಸಿದ್ದು, ನೋಂದಣಿ ಸಂಖ್ಯೆ: 75054 ರಡಿ ರಾಯಚೂರು ಕೇಂದ್ರದಿಂದ ಸದರೀ ಪರೀಕ್ಷೆಗೆ ಹಾಜರಾಗಿರುತ್ತಾರೆ. ಕನ್ನಡ ಭಾಷಾ ಪರೀಕ್ಷೆಯ ಪತ್ರಿಕೆ-1ರ ಮುಖ್ಯ ಉತ್ತರಪತ್ರಿಕೆ ಸಂಖ್ಯೆ: 091272ರ ಮುಖಪುಟದ ಮೇಲೆ ಅವರ ಹೆಸರು ಖಾದರ ಪಾಷ ಮತ್ತು ಅವರ ತಂದೆಯ ಹೆಸರು ರಬ್ಬುಸಾಬ್ ಎಂದು ನಮೂದಿಸಿರುವುದಲ್ಲದೆ ಇನ್ನಿತರ ಅನಾವಶ್ಯಕ ವಿಷಯಗಳನ್ನು ಬರೆದಿರುತ್ತಾರೆ.

ಅಭ್ಯರ್ಥಿಗೆ ನೀಡಲಾದ ಪ್ರವೇಶ ಪತ್ರದ ಹಿಂಬದಿಯಲ್ಲಿ ಅಭ್ಯರ್ಥಿಗಳಿಗೆ ಸೂಚನೆಗಳನ್ನು ನೀಡಲಾಗಿದ್ದು ಸದರೀ ಸೂಚನೆಗಳ ಕ್ರಮಸಂಖ್ಯೆ-4ರ ಮೇರೆಗೆ "ಯಾವುದೇ ಅಭ್ಯರ್ಥಿ ಉತ್ತರ ಪುಸ್ತಕದಲ್ಲಿ ಹಾಗೂ ಅಧಿಕ ಉತ್ತರಪತ್ರಿಕೆಯಲ್ಲಿ ಪ್ರಶ್ನೆಗಳಿಗೆ ಉತ್ತರಗಳನ್ನು ಮಾತ್ರ ಬರೆದಿರಬೇಕೇ ಹೊರತು ಇತರ ಯಾವುದೇ ರೀತಿಯ ಬರವಣಿಗೆ ಎಂದರೆ ತನ್ನನ್ನು ಪರೀಕ್ಷಕರು ಗುರುತಿಸಿಕೊಳ್ಳುವ ಹಾಗೆ ನೋಂದಣಿ ಸಂಖ್ಯೆ, ಹೆಸರು ಇತ್ಯಾದಿ ಬರೆಯುವುದು, ಪರೀಕ್ಷಕರಿಗೆ ಯಾವುದೇ ರೀತಿಯ ವಿನಂತಿ ಇತ್ಯಾದಿ - ಇದ್ದರೆ ಕಠಿಣ ಶಿಕ್ಷೆಗೆ ಗುರಿಯಾಗುವರು" ಎಂದು ನಮೂದಿಸಲಾಗಿರುತ್ತದೆ. ಆದಾಗ್ಯೂ ಆರೋಪಿತ ಅಭ್ಯರ್ಥಿಯು ಸದರಿ ಸೂಚನೆಗಳನ್ನು ಉಲ್ಲಂಘಿಸಿ ಉತ್ತರ ಪತ್ರಿಕೆಯ ಮುಖಪುಟದ ಮೇಲೆ ತಮ್ಮ ಹೆಸರು ಹಾಗೂ ಇತರ ವಿಷಯಗಳನ್ನು ಬರೆದಿರುವುದರಿಂದ ಅವರಿಗೆ ದಿನಾಂಕ: 12.08.2004 ರಂದು ಕಾರಣಕೇಳುವ ನೋಟೀಸನ್ನು ಜಾರಿಮಾಡಿದ್ದು, ಅದನ್ನು ಅವರು ದಿನಾಂಕ: 14.8.2004 ರಂದು ಸ್ವೀಕರಿಸಿದ್ದಾರೆ. ಸದರೀ ನೋಟೀಸಿನಲ್ಲಿ ಈ ರೀತಿ ಉತ್ತರಪತ್ರಿಕೆಯ ಮುಖಪುಟದಲ್ಲಿ ನಿಯಮ ಬಾಹಿರವಾಗಿ ಹೆಸರು ಮತ್ತು ಇನ್ನಿತರ ವಿಷಯಗಳನ್ನು ಬರೆದಿದ್ದು ಅವರ ಮೇಲೆ ಶಿಸ್ತು ಕ್ರಮವಾಗಿ ಸದರಿ ಅಧಿವೇಶನದ ಅಭ್ಯರ್ಥಿತ್ವವನ್ನು ಏಕೆ ರದ್ದು ಮಾಡಬಾರದು ಎಂಬ ಬಗ್ಗೆ 15 ದಿನಗಳೊಳಗಾಗಿ ಉತ್ತರಿಸಲು ಸೂಚಿಸಲಾಗಿತ್ತು. ಅಲ್ಲದೇ ಸಮಜಾಯಿಷಿಯನ್ನು ನೀಡಲು ತಪ್ಪಿದ್ದಲ್ಲಿ ಈ ಬಗ್ಗೆ ಅವರ ಹೇಳಿಕೆ ಏನೂ ಇಲ್ಲವೆಂದು ತೀರ್ಮಾನಿಸಿ ಸದರೀ ಅಧಿವೇಶನದ ಅಭ್ಯರ್ಥಿತನವನ್ನು ರದ್ದುಪಡಿಸುವ ದಂಡನೆಯನ್ನು ವಿಧಿಸಲಾಗುವುದು ಎಂದು ತಿಳಿಸಿದ್ದಾಗ್ಯೂ ಅವಧಿ ಮೀರಿದ ನಂತರವೂ ಅವರು ಉತ್ತರಿಸಿರುವುದಿಲ್ಲ. ಸದರೀ ನೋಟೀಸನ್ನು ಸ್ವೀಕರಿಸಿದ ನಂತರವೂ ಅವರು ನೋಟಿಸಿಗೆ ಉತ್ತರಿಸದೇ ಇರುವುದನ್ನು ಗಮನಿಸಿದಲ್ಲಿ ಅವರು ತಮ್ಮ ತಪ್ಪನ್ನು ಒಪ್ಪಿಕೊಂಡಂತಾಗುತ್ತದೆ. ಆದ್ದರಿಂದ ಆಯೋಗವು ಈ ಕೆಳಕಂಡ ಆದೇಶ ಹೊರಡಿಸಿದೆ.

**ಆದೇಶ ಸಂಖ್ಯೆ: ಇಪ(1) 3211/2004-05/ಪಿಎಸ್‌ಸಿ, ದಿನಾಂಕ: 7ನೇ ಅಕ್ಟೋಬರ್ 2004**

ಕರ್ನಾಟಕ ಲೋಕಸೇವಾ ಆಯೋಗದ (ಸೇವಾ ಪರೀಕ್ಷೆ ನಡೆಸುವಿಕೆ ನಿಯಮಾವಳಿಗಳು) 1965ರ ನಿಯಮ 14ರ ಹಾಗೂ ತತ್ಸಂಬಂಧದಲ್ಲಿ ಹೊರಡಿಸಲಾದ ಆಯೋಗದ ಅಧಿಕೃತ ಜ್ಞಾಪನ ಸಂಖ್ಯೆ: ಆಡಳಿತ 398/93-94/ಪಿಎಸ್‌ಸಿ ದಿನಾಂಕ: 14.07.1993 ರಲ್ಲಿ ಪ್ರದತ್ತವಾದ ಅಧಿಕಾರದ ಮೇರೆಗೆ ಆಪಾದಿತ ಅಭ್ಯರ್ಥಿ ಶ್ರೀ ಖಾದರ್ ಪಾಷ, (ನೋಂದಣಿ ಸಂಖ್ಯೆ: 75054) ಪೇದೆ ಸಂಖ್ಯೆ: 171, ಉಪ ಪೊಲೀಸ್ ಅಧೀಕ್ಷಕರ ಕಛೇರಿ, ಪೊಲೀಸ್ ಕೇಂದ್ರಸ್ಥಾನ, ರಾಯಚೂರು ಇವರ 2004ರ ಪ್ರಥಮ ಅಧಿವೇಶನದ ಇಲಾಖಾ ಪರೀಕ್ಷೆಯ ಅಭ್ಯರ್ಥಿತ್ವವನ್ನು ರದ್ದುಪಡಿಸಿದೆ.

ಆಯೋಗದ ಆದೇಶದ ಮೇರೆಗೆ

ಪಿ.ಆರ್. 1456 ಕಾರ್ಯದರ್ಶಿ ಮತ್ತು ನಿಯಂತ್ರಕರು, ಇಲಾಖಾ ಪರೀಕ್ಷೆಗಳು, ಕರ್ನಾಟಕ ಲೋಕಸೇವಾ ಆಯೋಗ.

**COMMERCE & INDUSTRIES DEPARTMENT**

**NOTIFICATION No: CI 46 SGF 2004, Bangalore, dated: 7th October 2004**

Whereas it is necessary to make an order with a view to enable the sugar factory of The Malnad Sugar Company Ltd., Arasanagatta, Bhadravathi Taluk, Shimoga District, factory at Arasanagatta to purchase the quantity of sugarcane required having regard to the crushing capacity of the factory the availability of sugarcane in the area where sugar cane is grown and the need for production of sugar.

Now, therefore, in exercise of the powers conferred by clause-6, 7, 8 and 9 of the Sugarcane (Control) Order, 1966 read with GSF 1127, dated: 16th July, 1966 of the Government of India in the Ministry of Food, Agriculture, Community Development and Co-operation (Department of Food), the Government of Karnataka hereby make the following orders namely:-

**1. Title, commencement and duration of operation:-**

i) This order may be called the Karnataka Sugarcane (Regulation of Distribution) for M/s. Malnad Sugar Company Ltd., Arasanagatta, Bhadravathi Taluk, Shimoga District order 2004.

ii) It shall come into force, only after the new sugar factory commences production.

**2. Definitions - In this order:-**

a) "Factory" means the premises of the factory at Arasanagatta owned by the Malnad Sugar Company Ltd., Arasanagatta, Bhadravathi, including the precincts of such factory.

b) "Form" means a form amended to this order.

c) words and expressions used in this order but not defined shall have the meaning assigned to them in clause-2 of the Sugarcane (Control) order, 1966.

**3. Determination of the quantity of Sugarcane required by the factory and reservation of the area for supply of sugarcane.**

i. The crushing capacity of the Malnad Sugar Company Ltd., Arasanagatta, Bhadravathi being 2500 Metric Tone per day, the quantity of Sugarcane required by the factory during a year is about 4.50 lakhs metric tonnes;

ii. The factory shall secure the sugarcane determined under sub-clause (2) from the area specified in schedule-1 to this order which shall be the reserved area for supplying sugarcane to the factory concerned till the new factories likely to come up in that area are established.

**4. Fixation of quantity of sugarcane to be supplied by the grower:-**

Every grower of sugarcane in the reserved area specified in Schedule-1 shall supply to the Factory ninety-five per cent of the Sugar cane grown by each sugar grower by himself or if he is a member of sugarcane growers co-operative society operating in the reserved area, through such society.

**5. Agreement to supply or purchase the determined quantity of Sugarcane:-**

Every grower of sugarcane or a sugarcane growers co-operative Society, supplying sugarcane to the factory and the factory shall enter into agreement to supply or purchase as the case may be, the quantity of sugarcane determined under clause-4.

**6. Prohibition of export of sugarcane from reserved area:-**

No sugarcane shall be exported from the reserved area except under and in accordance with the conditions of a permit issued by the Deputy Commissioner in Form-1 of Schedule-II.

**7. Issue of Permits:-**

i) Application for grant of permit under Clause-6 shall be made in Form-2 of Schedule-II and shall be accompanied by a fee of Rs.5/- and an amount of Rs.100/- as Security Deposit.

ii) If any condition of the permit is contravened, the Deputy Commissioner may after giving an opportunity to the person concerned to show cause why the amount deposited by way of security or any part thereof may not be forfeited, and pass order forfeiting the whole or part of the amount deposited as security.

By Order and in the name of the Governor of Karnataka,

**P. ANANDAKUMAR**

Desk Officer (ID), Commerce & Industries Department.

**SCHEDULE - I**

In the Govt. Notification No.CI 46 SGF 2004, dated: 16.09.2004, 35 villages of Shimoga and Bhadravathi Taluks are allotted in favour of M/s Mysore Paper Mills (L), Bhadravathi for the supply of sugarcane which were earlier allotted in favour of M/s Thungabhadra Sugars (Deve Sugars) The remaining all the villages belonging to M/s Thungabhadra Sugars Ltd. (Deve Sugars) are now allotted temporarily in favour of M/s Malnad Sugars (Ltd), Arasanaghatta, Bhadravathi for the supply of sugarcane.

**P. ANANDAKUMAR**

Desk Officer (ID), Commerce & Industries Department.

**SCHEDULE-II (See Clause-7)**

FORM-II, THE KARNATAKA SUGARCANE (REGULATION OF DISTRIBUTION), M/s. MALNAD SUGAR COMPANY LTD., ARASANAGHATTA, BHADRAVATHI, ORDER 2004

**Application for grant of permit for exporting sugarcane from a reserved Area**

| | |
|---|---|
| 1. Full name of the Applicant | |
| 2. Father's Name | |
| 3. Residential Address in full | |
| 4. Quantity of Sugarcane for which permit is requested for Export | |
| 5. Area and the Village from which Sugarcane is intended to be exported | |
| 6. The purpose for which the export is intended | |
| i) For sale | |
| ii) For crushing sugarcane juice or manufacture of gur/Sakkare Gul/Jaggery/Rabi or Khandasari for sale or self consumption | |

I declare that I am fully aware of the provisions of the Karnataka Sugarcane (Regulation of Distribution) M/s. Malnad Sugar Company Ltd., Arasanaghatta Order 2004 and the particulars furnished in the application are true to the best of my knowledge and belief and the permit to be issued will be properly used for the purpose for which it is issued. I have actually read/got read and understood the conditions of the permit given in Form No.1 of the Schedule appended to the Karnataka Sugarcane (Regulation of Distribution) M/s. Malnad Sugar Company Ltd., Arasanaghatta order 2004 and I agree to abide by them.

Place: SIGNATURE OF THE APPLICANT.

Date:

**SCHEDULE - II**

**FORM - I**

**[See Clause - 6]**

**The Karnataka Sugarcane (Regulation of Distribution), M/s. Malnad Sugar Company Ltd., Arasanaghatta Orders-2004**

Permit No. Date:

| | |
|---|---|
| 1. Full name of the permit Holder | |
| 2. Father's Name | |
| 3. Residential Address in Full | |
| 4. Quantity of Sugarcane for which permit is granted for export | |
| 5. Area and village from which Sugarcane is permitted to be exported | |
| 6. a. place to which it is to be exported | |
| b. The purpose for which export is permitted | |
| i. For Sale | |
| ii. For crushing Sugar Cane juice for manufacture of Gur/Sakkare Gul/Jaggery Rabi or Khandasari. | |
| 7. Their permit is valid upto | |
| 8. The permit is granted subject to the following terms and conditions:- | |
| a. Permit is not transferable | |
| b. The permit shall be produced on demand by an officer authorised by the Deputy Commissioner. | |
| c. on expiry of the validity of the permission within 48 hours of the expirty of the validity date the permit shall be surrendered to the permit issuing Authority. | |

Place: Signature of the Permit Issuing Authority.

Date:

**P. ANANDAKUMAR**

P.R. 1458 Desk Officer (ID), Commerce & Industries Department.

**ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಉತ್ತರ ಕನ್ನಡ ಜಿಲ್ಲೆ, ಕಾರವಾರ ರವರ ನ್ಯಾಯಾಲಯದಲ್ಲಿ**
**ಸಂಖ್ಯೆ: ಅಬಕಾರಿ/ಸಿಆರ್‌ಎಂ/ಡಿಟಿಸಿಆರ್/22/1999-2000, ದಿನಾಂಕ: 30ನೇ ಸೆಪ್ಟೆಂಬರ್ 2004**

**ಉಪಸ್ಥಿತರು:** ಶ್ರೀ ಕೆ.ಸಿ. ಹರಿದಾಸ್, ಕೆ.ಇ.ಎಸ್.,
ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಉತ್ತರ ಕನ್ನಡ ಜಿಲ್ಲೆ, ಕಾರವಾರ.

**ಫಿರ್ಯಾದುದಾರರು:** ಪಿ.ಜಿ. ನಾಯ್ಕ, ಸಹಾಯಕ ಪೊಲೀಸ್ ಉಪ ನಿರೀಕ್ಷಕರು, ಹೊನ್ನಾವರ ಪೊಲೀಸ್ ಠಾಣೆ.
(ಮಾನ್ಯ ಸಹಾಯಕ ಅಭಿಯೋಜಕ ನಿರ್ದೇಶಕರು, ಕಾರವಾರ ರವರು ಪ್ರತಿನಿಧಿಸಿರುತ್ತಾರೆ)
**ವಿರುದ್ಧ**

**ಅರ್ಜಿದಾರರು:** ಗಣೇಶ ವಿನಾಯಕ ಅಂಬಿಗ, ಸಾ: ಗುಣವಂತೆ, ಪ್ಲಾಟ್ ಮನೆ.
(ಶ್ರೀ ಎನ್.ಎಸ್. ಭಟ್, ವಕೀಲರು, ಕಾರವಾರ ಇವರು ಪ್ರತಿನಿಧಿಸಿರುತ್ತಾರೆ)

**ತೀರ್ಪು**

1. ಈ ಆರೋಪಣಾ ಪಟ್ಟಿಯನ್ನು ಹೊನ್ನಾವರ ಪೊಲೀಸರು ಆರೋಪಿಯ ವಿರುದ್ಧ ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 32 ಹಾಗೂ 34 ರಡಿಯಲ್ಲಿ ಸಲ್ಲಿಸಿ, ಜಪ್ತಿಯಾದಂತಹ ಸ್ವತ್ತುಗಳನ್ನು ಕಲಂ 43ಎ(2) ರನ್ವಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಸಲ್ಲಿಸಿದ ಪ್ರಸ್ತಾವನೆಯಾಗಿರುತ್ತದೆ.

2. ಸಹಾಯಕ ಪೊಲೀಸ್ ಉಪ ನಿರೀಕ್ಷಕರು, ಹೊನ್ನಾವರ ಇವರು ದಿನಾಂಕ: 17.05.1999 ರಂದು ತನ್ನ ಇನ್ನೊಬ್ಬ ಸಹೋದ್ಯೋಗಿ ಹಾಗೂ ಸಿಬ್ಬಂದಿಗಳೊಂದಿಗೆ ಹೊನ್ನಾವರ ತಾಲ್ಲೂಕಿನ ಹೊನ್ನಾವರ-ಕುಮಟಾ ಎನ್‌ಎಚ್-17 ರಸ್ತೆಯ ಕರ್ಕಿ ತೊಪ್ಪಲಕೇರಿ ಕ್ರಾಸ್‌ನ ಅಕ್ಕಿ ಗಿರಣಿಯ ಹತ್ತಿರ ತಲುಪಿದಾಗ ಒಬ್ಬ ಇಸಮನು ತಾನು ನಡೆಸಿಕೊಂಡು ಹೋಗುತ್ತಿದ್ದ ಯಮಹ ಆರ್‌ಎಕ್ಸ್-100 ಮೋಟಾರ್ ಸೈಕಲ್ ಸಂಖ್ಯೆ: ಕೆಎ-30/ಎಚ್-574 ನೇದರ ಮೇಲೆ ಎರಡು ಬದಿಗೆ ಮೋಟಾರ್ ಟ್ಯೂಬಿನಲ್ಲಿ ಏನೋ ತುಂಬಿ ಕಟ್ಟಿಕೊಂಡು ಹೋಗುತ್ತಿದ್ದುದನ್ನು ಕಂಡು ಸಂಶಯ ಬಂದು ಬೆನ್ನಟ್ಟಿ ಹಿಡಿಯಲು ಪ್ರಯತ್ನಿಸಿದಾಗ ಸದರಿ ಮೋಟಾರ್ ಸೈಕಲ್ ಸವಾರನು ಸದರಿ ಗಾಡಿ ಹಾಗೂ ಗಾಡಿಯಲ್ಲಿದ್ದ ಟ್ಯೂಬು ಸಮೇತ ಬಿಟ್ಟು ಓಡಿದಾಗ, ಇಬ್ಬರು ಪಂಚರನ್ನು ಕರೆಯಿಸಿ, ಮೋಟಾರ್ ಸೈಕಲಿಗೆ ಕಟ್ಟಿದ ಟ್ಯೂಬನ್ನು ಬಿಚ್ಚಿ ಪರಿಶೀಲಿಸಲಾಗಿ ಸದರ ಮೋಟಾರ್ ಟ್ಯೂಬಿನಲ್ಲಿ ಬೆಲ್ಲದ ಭಟ್ಟಿ ಸರಾಯಿಯ ಉಗ್ರ ವಾಸನೆ ಬರುತಿದ್ದುದರಿಂದ ಹಾಗೂ ಇದನ್ನು ಆರೋಪಿತನು ತನ್ನ ವಾಹನದ ಮೇಲೆ ಅನಧಿಕೃತವಾಗಿ ಸಾಗಿಸಿದ್ದು ಖಚಿತಪಟ್ಟಿದ್ದರಿಂದ ಇವುಗಳನ್ನು ಅನಧಿಕೃತವಾಗಿ ಸಾಗಿಸಿದ್ದು ವ್ಯಕ್ತವಾಗಿದ್ದರಿಂದ ಅವುಗಳನ್ನು ತಾಬಾದಲ್ಲಿ ತೆಗೆದುಕೊಂಡು ಪಂಚರ ಸಮಕ್ಷಮ ಮುಂದಿನ ಕ್ರಮ ಜರುಗಿಸಿ, ಇದು ಕರ್ನಾಟಕ ಅಬಕಾರಿ ಕಾಯ್ದೆ 1965 ಕಲಂ 32 ಮತ್ತು 34 ರಂತೆ ಶಿಕ್ಷಾರ್ಹವಾಗಿರುವುದಾಗಿ ತನ್ನ ಫಿರ್ಯಾದನ್ನು ಹೊನ್ನಾವರ ಪೊಲೀಸ್ ಠಾಣೆಯಲ್ಲಿ ದಾಖಲಿಸಿದ ಪ್ರಕಾರ ಗುನ್ನೆ ಸಂಖ್ಯೆ: 132/1999, ದಿನಾಂಕ: 17/05/1999 ರಂತೆ ಪ್ರಕರಣ ದಾಖಲಿಸಿ, ಸಂಬಂಧಪಟ್ಟ ಪ್ರಥಮ ಮಾಹಿತಿ ವರದಿ, ಪಂಚನಾಮೆ ಮತ್ತು ಸ್ವತ್ತಿನ ಪಟ್ಟಿಯನ್ನು ಈ ಪ್ರಾಧಿಕಾರಕ್ಕೆ ಹಾಜರುಪಡಿಸಿರುತ್ತಾರೆ. ಜಪ್ತಿಯಾದ ಸ್ವತ್ತುಗಳ ವಿವರ ಈ ಕೆಳಗಿನಂತಿದೆ.

1. 2 ಮೋಟಾರ್ ಟ್ಯೂಬುಗಳಲ್ಲಿ ಪ್ರತಿಯೊಂದರಲ್ಲಿ 35 ಲೀಟರಿನಂತೆ ಸಾರಾಯಿ ಇರುತ್ತದೆ.
2. ಯಮಹ ಮೋಟಾರ್ ಸೈಕಲ್ ಸಂಖ್ಯೆ: ಕೆಎ-30/ಎಚ್-574

3. ದಿನಾಂಕ: 01.06.1999 ರಂದು ಶ್ರೀ ಎನ್.ಎಸ್. ಭಟ್, ವಕೀಲರು, ಕಾರವಾರ ಇವರು ಜಪ್ತಿಯಾದ ವಾಹನದ ದಾಖಲೆಗಳ ನಕಲಿನೊಂದಿಗೆ ಈ ಪ್ರಾಧಿಕಾರದಲ್ಲಿ ಅರ್ಜಿ ಸಲ್ಲಿಸುತ್ತಾ, ವಾಹನವು ಗಣೇಶ ವಿನಾಯಕ ಅಂಬಿಗ ಸಾ: ಗುಣವಂತೆ, ಪ್ಲಾಟ್ ಮನೆ, ಹೊನ್ನಾವರ ಇವರ ಮಾಲೀಕತ್ವದಾಗಿದ್ದು, ಸದರಿ ವಾಹನದ ಮೇಲೆ ಹೊರಿಸಲಾಗಿರುವ ಆರೋಪವನ್ನು ಅಲ್ಲಗಳೆದು ಅದನ್ನು ಮಧ್ಯಂತರ ವಶಕ್ಕೆ ಬಿಡುಗಡೆ ಮಾಡಲು ವಿನಂತಿಸಿರುತ್ತಾರೆ.

4. ಫಿರ್ಯಾದುದಾರರು ಸಲ್ಲಿಸಿದ ದಾಖಲೆಗಳನ್ನಾಧರಿಸಿ ಪ್ರಕರಣದ ಆರೋಪಿಯಾದ ಗಣೇಶ ವಿನಾಯಕ ಅಂಬಿಗ ಸಾ: ಗುಣವಂತೆ, ಹೊನ್ನಾವರ ಇವರಿಗೆ ಸಂಖ್ಯೆ: ಅಬಕಾರಿ/ಡಿಟಿಸಿಆರ್/22/1999-2000, ದಿನಾಂಕ: 4/06/1999 ರಂತೆ ಈ ಪ್ರಕರಣದಲ್ಲಿ ಜಪ್ತಿಯಾದಂತಹ ಸ್ವತ್ತುಗಳನ್ನು ಸರ್ಕಾರಕ್ಕೆ ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂಬುದಕ್ಕಾಗಿ ಕ.ಅ. ಕಾಯ್ದೆ ಕಲಂ 43ಬಿ (1)ಎ ಪ್ರಕಾರ ಕಾರಣ ಕೇಳಿ ನೋಟೀಸನ್ನು ನೀಡಲಾಗಿ ಅದನ್ನು ಅವರಿಗೆ ದಿನಾಂಕ: 25/06/1999 ರಂದು ತನಿಖಾಧಿಕಾರಿಗಳು ಜಾರಿ ಮಾಡಿರುತ್ತಾರೆ. ಸದರಿ ನೋಟೀಸಿಗೆ ಅರ್ಜಿದಾರರ ಪರ ವಕೀಲರು ದಿನಾಂಕ: 28/07/2004 ರಂತೆ ಸಮಜಾಯಿಷಿಯನ್ನು ನೀಡಿರುತ್ತಾರೆ.

5. ಈ ಪ್ರಾಧಿಕಾರದ ಆದೇಶ ಸಂಖ್ಯೆ: ಅಬಕಾರಿ/ಸಿಆರ್‌ಎಂ/ಡಿಟಿಸಿಆರ್/22/1999-2000, ದಿನಾಂಕ: 22/07/1999 ರಂತೆ ರೂ.10,000/- ಗಳ ಎಸ್.ಬಿ.ಎಂ., ಕಾರವಾರ ಶಾಖೆಯ ಫಿಕ್ಸೆಡ್ ಡಿಪಾಜಿಟನ್ನು ಈ ಪ್ರಾಧಿಕಾರದ ಹೆಸರಿಗೆ ಪಡೆದು ವಾಹನವನ್ನು ಅರ್ಜಿದಾರರಿಗೆ ಮಧ್ಯಂತರ ವಶಕ್ಕೆ ಬಿಡುಗಡೆ ಮಾಡಲಾಗಿರುತ್ತದೆ.

6. ಪ್ರಕರಣದ ತನಿಖಾಧಿಕಾರಿಗಳು ದಿನಾಂಕ: 30.09.2000 ರಂದು ಈ ಪ್ರಾಧಿಕಾರಕ್ಕೆ ರಾಸಾಯನಿಕ ವಿಶ್ಲೇಷಣಾ ವರದಿಯ ದೃಢೀಕೃತ ನಕಲನ್ನು ಮುಂದಿನ ಕ್ರಮಕ್ಕಾಗಿ ಸಲ್ಲಿಸಿರುತ್ತಾರೆ. ಸದರಿ ವರದಿಯ ಪ್ರಕಾರ ಮಾದರಿ ಸೀಸೆಗಳಲ್ಲಿ ಆಲ್ಕೋಹಾಲ್ ಪತ್ತೆಯಾಗಿದ್ದು, ಅದರಲ್ಲಿಯ ಮದ್ಯಸಾರದ ಅಂಶವು ಶೇ.35.97ವಿ/ವಿ ಯಷ್ಟು ಇದ್ದು, ಇದು ಮಾನವ ಸೇವನೆಗೆ ಯೋಗ್ಯವಿರುವುದಿಲ್ಲವಾಗಿ ತಜ್ಞರು ಅಭಿಪ್ರಾಯಪಟ್ಟಿರುತ್ತಾರೆ.

7. ಪ್ರಾಧಿಕಾರದ ಆದೇಶ ಸಂಖ್ಯೆ: ಅಬಕಾರಿ/ಸಿಆರ್‌ಎಂ/ಡಿಟಿಸಿಆರ್/22/1999-2000 ದಿನಾಂಕ: 24/02/2001 ರಂತೆ ಈ ಪ್ರಕರಣದಲ್ಲಿ ಜಪ್ತಿಯಾದಂತಹ 70 ಲೀಟರ್ ಕಳ್ಳಭಟ್ಟಿ ಸಾರಾಯಿಯನ್ನು ಟ್ಯೂಬಿನ ಸಮೇತ ನಾಶಪಡಿಸಲು ಆದೇಶಿಸಲಾಗಿರುತ್ತದೆ.

8. ಲಭ್ಯವಿರುವ ದಾಖಲೆಗಳು ಹಾಗೂ ರಾಸಾಯನಿಕ ವಿಶ್ಲೇಷಣಾ ವರದಿಯನ್ನಾಧರಿಸಿ ವಾಹನದ ಮುಟ್ಟುಗೋಲು ನಡಾವಳಿಯನ್ನು ಪ್ರಾರಂಭಿಸುವ ಮುನ್ನ ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43ಬಿ(1)ಸಿ ಪ್ರಕಾರ ವಿಚಾರಣೆಯನ್ನು ಕೈಗೆತ್ತಿಕೊಂಡು ಫಿರ್ಯಾದುದಾರರು ಸಲ್ಲಿಸಿರುವ ದಾಖಲೆಯ ಪ್ರತಿಗಳನ್ನು ಸಿಆರ್‌ಪಿಸಿ ಕಲಂ 207 ರಂತೆ ಅರ್ಜಿದಾರರಿಗೆ ನೀಡಲಾಯಿತು. ನಂತರ ಕಲಂ 32 ಮತ್ತು 34 ರಂತೆ ಹೊರಿಸಿದ ಆರೋಪದ ಬಗ್ಗೆ ಓದಿ ವಿವರಿಸಲಾಗಿ ಅರ್ಜಿದಾರರು ತನ್ನ ಮೇಲೆ ಹೊರಿಸಿದ ಆರೋಪಗಳನ್ನು ಅಲ್ಲಗಳೆದಾಗ ಅಭಿಯೋಜನೆ ಪಕ್ಷದವರು ಎದುರುದಾರರ ವಿರುದ್ಧ ಆರೋಪಗಳನ್ನು ಸಾಬೀತುಪಡಿಸಲು ಪಿಡಬ್ಲ್ಯೂ 1 ರಿಂದ 2ರ ವರೆಗೆ ಸಾಕ್ಷಿದಾರರೆಂದು ವಿಚಾರಣೆ ಮಾಡಿಸಿ, ನಿಶಾನೆ ಪಿ1 ರಿಂದ 4 ರವರೆಗೆ ದಾಖಲೆಗಳನ್ನು ಗುರ್ತಿಸಿಕೊಂಡಿರುತ್ತಾರೆ. ಪಂಚ

ಸಾಕ್ಷಿದಾರರಿಬ್ಬರಿಗೂ ಸಾಕಷ್ಟು ಬಾರಿ ನೋಟೀಸುಗಳನ್ನು ಕಳುಹಿಸಿ, ಅನಂತರ ಬೇಲೆಬಲ್ ವಾರಂಟ್‌ನ್ನು ಜಾರಿಗೊಳಿಸಲಾದರೂ ಸಹ ಹಾಜರಿರುವುದಿಲ್ಲ.

9. ಆದಾಗ್ಯೂ ಎದುರುದಾರರ ವಿರುದ್ಧ ಸಾಕಷ್ಟು ಲಿಖಿತ ಮತ್ತು ಮೌಖಿಕ ಸಾಕ್ಷ್ಯಾಧಾರಗಳು ಇದ್ದದ್ದು ಕಂಡುಬಂದಿದ್ದರಿಂದ ದಂಡ ಪ್ರಕ್ರಿಯಾ ಸಂಹಿತೆ ಕಲಂ 313 ರಡಿಯಲ್ಲಿ ಅರ್ಜಿದಾರರ ಪರ ಹೇಳಿಕೆಯನ್ನು ಡಿ.ಡಬ್ಲ್ಯೂ-1 ರಂತೆ ನುಡಿಸಿರುತ್ತಾರೆ.

10. ಸರ್ಕಾರದ ಪರವಾಗಿ ಮಾನ್ಯ ಅಭಿಯೋಗ ಸಹಾಯಕ ನಿರ್ದೇಶಕರು, ಕಾರವಾರ ರವರ ಹಾಗೂ ಅರ್ಜಿದಾರರ ಪರವಾಗಿ ಶ್ರೀ ಎನ್.ಎಸ್. ಭಟ್, ವಕೀಲರು ಕಾರವಾರರವರು ಮಂಡಿಸಿದ ವಾದ ವಿವಾದಗಳನ್ನು ಆಲಿಸಲಾಯಿತು. ಉಭಯತರ ಪಕ್ಷದವರು ನುಡಿದಿರುವ ಸಾಕ್ಷ್ಯಗಳ ಆಧಾರದ ಮೇಲೆ ಮುಂದಿನ ಆದೇಶವನ್ನು ಹೊರಡಿಸುವ ಮುನ್ನ ಈ ಕೆಳಗಿನ ವಿವಾದಾಂಶಗಳಿಗೆ ಉತ್ತರವನ್ನು ಪಡೆಯುವುದು ಸೂಕ್ತವೆಂದು ಕಂಡು ಬಂತು.

11. 1. ಹೊನ್ನಾವರ ತಾಲ್ಲೂಕಿನ ಹೊನ್ನಾವರ-ಕುಮಟಾ ಎನ್‌ಎಚ್-17 ರಸ್ತೆಯ ಕರ್ಕಿ ತಪ್ಪಲಕೇರಿ ಕ್ರಾಸಿನ ಅಕ್ಕಿ ಗಿರಣಿಯ ಹತ್ತಿರ ಆರೋಪಿಯಾದ ಗಣೇಶ ಅಂಬಿಗ ಈತನು ತಾನು ಚಲಾಯಿಸಿಕೊಂಡು ಬರುತ್ತಿದ್ದ ಯಮಹಾ ಆರ್‌ಎಕ್ಸ್-100 ಮೋಟಾರ್ ಸೈಕಲ್ ಸಂಖ್ಯೆ: ಕೆಎ-30/ಎಚ್-574 ನೇದರ ಮೇಲೆ ಎರಡು ಮೋಟಾರ್ ಟ್ಯೂಬುಗಳಲ್ಲಿ ಪ್ರತಿಯೊಂದರಲ್ಲಿ 35 ಲೀಟರಿನಂತೆ ಸರಾಯಿಯನ್ನು ಅಕ್ರಮವಾಗಿ ಸಾಗಾಟ ಮಾಡುತ್ತಿದ್ದಾಗ ಸಿಕ್ಕಿಬಿದ್ದು ಕರ್ನಾಟಕ ಅಬಕಾರಿ ಕಾಯ್ದೆ ಕಲಂ 32 ಹಾಗೂ 34 ರಡಿ ಶಿಕ್ಷಾರ್ಹ ಅಪರಾಧ ಮಾಡಿದ್ದಾನೆಂದು ಅಭಿಯೋಜನೆಯವರು ರುಜುವಾತುಪಡಿಸುತ್ತಾರೆಯೇ, ಹೇಗೆ?

2. ಘಟನೆ ಸಂಭವಿಸಿದಾಗ ವಾಹನವು ಯಾರ ವಶದಲ್ಲಿತ್ತೋ ಅವರಿಗೆ ಅಥವಾ ಆ ವಾಹನದ ಮಾಲೀಕರಿಗೆ ಅಥವಾ ಅವರ ಏಜೆಂಟರ ಗಮನಕ್ಕೆ ಬಾರದೇ ಹಾಗೂ ಅವರೆಲ್ಲರಿಗೂ ಅರಿವಿಲ್ಲದಂತೆ ಮತ್ತು ಅವರು ಶಾಮೀಲಾಗದೇ ಈ ವಾಹನದಲ್ಲಿ ಅಕ್ರಮ ಸರಾಯಿ ಸಾಗಾಣಿಕೆಯಾಗಿದೆ ಎಂಬ ಅಂಶವನ್ನು ಇವರೆಲ್ಲರೂ ಈ ಪ್ರಾಧಿಕಾರದಲ್ಲಿ ತೃಪ್ತಿಕರವಾಗಿ ನಿರೂಪಿಸಿರುತ್ತಾರೆಯೇ?

3. ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಿದೆಯೇ?

12. ಅಂಶ 1:- ಸಕಾರಾತ್ಮಕವಾಗಿ
ಅಂಶ 2:- ಸಕಾರಾತ್ಮಕವಾಗಿ
ಅಂಶ 3:- ಸಕಾರಾತ್ಮಕವಾಗಿ

**ಕಾರಣಗಳು**

13. ಒಂದನೆಯ ವಿವಾದಾಂಶವನ್ನು ರುಜುವಾತುಪಡಿಸಲು ಅಭಿಯೋಜಕರ ಪರ ಮುಖ್ಯ ಸಾಕ್ಷಿದಾರರಾದ ಪ್ರಕರಣದ ಫಿರ್ಯಾದಿ ಪಿ.ಜಿ. ನಾಯ್ಕ, ಎ.ಎಸ್.ಐ. ರವರು ಈ ಪ್ರಾಧಿಕಾರದಲ್ಲಿ ದಿನಾಂಕ: 21/11/2001 ರಂದು ಈ ಪ್ರಾಧಿಕಾರದಲ್ಲಿ ಹಾಜರಾಗಿ ಮಾನ್ಯ ಎ.ಡಿ.ಪಿ. ಯವರ ಮುಖ್ಯ ವಿಚಾರಣೆಗೆ ಉತ್ತರಿಸುತ್ತಾ, ಪಂಚನಾಮೆಯಲ್ಲಿನ ಎಲ್ಲಾ ಅಂಶಗಳನ್ನು ಪ್ರಬಲವಾಗಿ ಸಮರ್ಥಿಸಿರುತ್ತಾರೆ. ನಂತರ ಅರ್ಜಿದಾರರ ಪರ ವಕೀಲರು ಮಾಡಿದ ಪಾಟಿ ಸವಾಲಿನಲ್ಲಿ ತೊಪ್ಪಲಕೇರಿ ಹೊನ್ನಾವರ ಪೊಲೀಸ್ ಠಾಣೆಯಿಂದ 5 ಕಿ.ಮೀ. ದೂರದಲ್ಲಿದೆಯೆಂದೂ, ತೊಪ್ಪಲಕೇರಿಯು ರಾಷ್ಟ್ರೀಯ ಹೆದ್ದಾರಿಯ ಪಕ್ಕದಲ್ಲಿದೆಯೆಂದೂ, ತೊಪ್ಪಲಕೇರಿಯ ಕ್ರಾಸಿನಿಂದ ಉತ್ತರಕ್ಕೆ ಹಾಗೂ ದಕ್ಷಿಣಕ್ಕೆ ಸಾಕಷ್ಟು ಮನೆಗಳು ಇದ್ದಾವೆ ಅಂದರೆ ಸರಿಯಲ್ಲವೆಂದೂ, ತೊಪ್ಪಲಕೇರಿಯ ಕ್ರಾಸಿನಲ್ಲಿ ಅಂಗಡಿಗಳಿಲ್ಲ ಅನ್ನುವುದು ಸರಿಯೆಂದೂ, ತಾವು ಆ ದಿವಸ ಪೆಟ್ರೋಲಿಂಗ್ ಹೋದದ್ದು ದಿನಚರಿಯಲ್ಲಿ ನಮೂದಿಸಿದ್ದೇನೆಂದೂ, ಹಾಜರುಪಡಿಸುವ ಅಗತ್ಯವಿರದ ಕಾರಣ ಹಾಜರುಪಡಿಸಿರಲಿಲ್ಲವೆಂದೂ, ಆ ದಿವಸ ನಾವು ಜೀಪಿನಲ್ಲಿ ಹೋಗುವಾಗ ಸುಮಾರು ಒಂದು ಫರ್ಲಾಂಗ್ ದೂರದಲ್ಲಿ ಮೋಟಾರ್ ಸೈಕಲ್ ಮೇಲೆ ಹೋಗುವವರನ್ನು ನೋಡಿದ್ದೆವೆಂದೂ, ಆ ಮೋಟಾರ್ ಸೈಕಲ್ ಸವಾರನನ್ನು ಹಿಡಿಯಲು ತಾವು ಪ್ರಯತ್ನ ಮಾಡಿದ್ದೇವೆಂದೂ, ತನ್ನ ಅವಧಿಯಲ್ಲಿ ಯಾವುದೂ ವಾರಸುದಾರರಿಲ್ಲದಂತಹ ಅಬಕಾರಿ ಮಾಲು ಸಿಕ್ಕಿರುವುದಿಲ್ಲವೆಂದೂ, ವಾಹನವನ್ನು ಜಪ್ತು ಮಾಡುವ ಪೂರ್ವದಲ್ಲಿ ಮ್ಯಾಜಿಸ್ಟ್ರೇಟರಿಂದ ಜಪ್ತಿಯ ವಾರಂಟ್‌ನ್ನು ಪಡೆದಿರುವುದಿಲ್ಲವೆಂದೂ, ಮಾದರಿಗಾಗಿ 750 ಎಂಎಲ್‌ನ 2 ಖಾಲಿ ಬಾಟ್ಲಿಗಳನ್ನು ಪ್ರತ್ಯೇಕವಾಗಿ ಜಪ್ತಿಯಾದಂತಹ ಟ್ಯೂಬಿನಿಂದ ದ್ರವ ಪದಾರ್ಥಗಳನ್ನು ತೆಗೆದು ಸೀಲ್ ಮಾಡಿ, ಲೇಬಲ್ ಹಚ್ಚಿ, ರಾಸಾಯನಿಕ ಪರೀಕ್ಷೆಗೆ ತೆಗೆದುಕೊಂಡಿರುತ್ತೇನೆಂದೂ, ಜಪ್ತಿಯಾದಂತಹ ಪೂರ್ತಿ ದ್ರವ ಪದಾರ್ಥವನ್ನು ಮಾದರಿಯಾಗಿ ತೆಗೆದು ರಾಸಾಯನಿಕ ಪರೀಕ್ಷೆಗೆ ಕಳುಹಿಸಲು ತೊಂದರೆ ಏನು ಇರಲಿಲ್ಲವೆಂದೂ, ಸದರಿ ವಾಹನದ ಮೇಲೆ ಯಾವುದೇ ಟ್ಯೂಬುಗಳಿರಲಿಲ್ಲ ಎನ್ನುವುದು ಸರಿಯಲ್ಲವೆಂದೂ, ಈ ವಾಹನವು ಯಾವ ಅಬಕಾರಿ ಗುನ್ನೆಗೆ ಸಂಬಂಧಪಡದಿದ್ದರೂ ಅಂಕಿ ಸಂಖ್ಯೆಗೋಸ್ಕರ ಸುಳ್ಳು ಕೇಸನ್ನು ದಾಖಲಿಸಿದ್ದೇವೆ ಅನ್ನುವುದು ಸರಿಯಲ್ಲವೆಂದೂ, ಆ ದಿವಸ ತೊಪ್ಪಲಕೇರಿಯಲ್ಲಿ ಮೋಟಾರ್ ಸೈಕಲನ್ನು ಹಿಡಿಯಲೇ ಇಲ್ಲ ಅನ್ನುವುದು ಸರಿಯಲ್ಲವೆಂದೂ, ಸ್ಥಳದಲ್ಲಿ ಪಂಚನಾಮೆ ಮಾಡಿಲ್ಲ ಅನ್ನುವುದು ಸರಿಯಲ್ಲವೆಂದೂ, ವಾಹನಕ್ಕೂ ಮತ್ತು ಈ ಗುನ್ನೆಗೆ ಯಾವುದೇ ಸಂಬಂಧವಿಲ್ಲ ಅನ್ನುವುದು ಸರಿಯಲ್ಲವೆಂದೂ ನುಡಿದಿರುತ್ತಾರೆ.

**14. ಇಲ್ಲಿ ಗಮನಿಸಬೇಕಾದ ಮುಖ್ಯ ಅಂಶವೇನೆಂದರೆ:-** ಘಟನಾ ಸ್ಥಳದ ಅಕ್ಕ-ಪಕ್ಕಗಳಲ್ಲಿ ಮಾನವ ವಾಸ್ತವ್ಯ ಇಲ್ಲದಿದ್ದ ಪ್ರಯುಕ್ತ ಸ್ಥಳೀಯ ಪಂಚರನ್ನು ಸಾಕ್ಷಿಗಾಗಿ ಪಡೆಯದಿರುವುದು ಕಂಡುಬರುತ್ತದೆ. ದಿನಚರಿಯ ಪ್ರತಿಗಳನ್ನು ಎದುರುದಾರರ ಪಕ್ಷದವರು ತರಿಸಿಕೊಳ್ಳಬಹುದಾಗಿತ್ತು. ವಾರಸುದಾರರಿಲ್ಲದ ಮಾಲನ್ನು ಸೇರಿಸಿ ಇದೇ ವಾಹನದ ಮೇಲೆ ಆರೋಪ ಹೊರಿಸಲು ಕಾರಣವೇನೆಂಬುದನ್ನು ವಿವರಿಸಿಲ್ಲ. ಕರ್ನಾಟಕ ಅಬಕಾರಿ ಕಾಯ್ದೆಯಲ್ಲಿನ ಪ್ರಕರಣವನ್ನು ಪತ್ತೆ ಹಚ್ಚುವ ಸಮಯದಲ್ಲಿ ಆರೋಪಿಯು ತಪ್ಪಿಸಿಕೊಳ್ಳುವ ಸಂದರ್ಭವಿದ್ದಲ್ಲಿ, ಮತ್ತು ಮುದ್ದೆ ಮಾಲುಗಳನ್ನು ಬೇರೆಡೆಗೆ ಸಾಗಿಸಬಹುದೆಂಬ ಅನುಮಾನವಿದ್ದಾಗ ಘನ ನ್ಯಾಯಾಲಯದಿಂದ ಸರ್ಚ್ ವಾರಂಟನ್ನು ಪಡೆಯಲು ಸಾಧ್ಯವಾಗದಿದ್ದ ಸಂದರ್ಭದಲ್ಲಿ ಜಪ್ತು ಮತ್ತು ದಸ್ತಗಿರಿಯ ಕ್ರಮವನ್ನು ಜರುಗಿಸಲು ಅನ್ವೇಷಣಾಧಿಕಾರಿಗೆ ಕಲಂ 52 ರಲ್ಲಿ ಅಧಿಕಾರವಿರುತ್ತದೆ.

ಗೌರವಾನ್ವಿತ ಮಾನ್ಯ ಉಚ್ಚ ನ್ಯಾಯಾಲಯದ ವಿಭಾಗೀಯ ಪೀಠದ ತೀರ್ಪು ಐಎಲ್‌ಆರ್ 2004 ಕೆಎಆರ್ 527 (ಶ್ರೀ ಸೋಮನಾಥ ಕರೇಬೈಲ್ ವಿರುದ್ಧ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಬೆಳಗಾಂ ವರಲ್ಲಿ) ಈ ಕೆಳಗಿನಂತೆ ತೀರ್ಪಾಗಿರುತ್ತದೆ.

In the Case of a search of a vessel, raft, vehicle or animal, the offender will undoubtedly have the opportunity to escape if the officer proposing to conduct the search were to approach a Magistrate to obtain a search warrant before actually conducting the search. That is so, particularly when illicit transport

of excisable goods more often than not takes place at odd hours of the day and night to avoid detection, Such offenders are nabbed in the course of routine checks or on the basis of source information received by the excise authorities. To say that a search of a vehicle. Vessel, raft or animal can be conducted only after obtaining a warrant may therefore be unrealistic and may potentially defeat the very object underlying the excise legislation. That is because in the case of excisable goods that are in a state of motion, any delay which is implicit in an attempt to get a search warrant will give the Offender the opportunity to escape or destroy the evidence regarding the offence.

Failure to record in black and white what is obvious may not therefore by itself constitute an illegality so as to render the search or the subsequent proceedings based on the same illegal. Such failure may be only procedural irregularity not affecting the validity of the search.

The seizure of the goods while the same were in motion or were capable of being put into motion should sufficiently satisfy the conscience of the law that no prejudice on account of non recording of the reasons for not obtaining warrant has been caused.

16. ಆದುದರಿಂದ ಈ ಪ್ರಕರಣದಲ್ಲಿ ಜಪ್ತಿ ವಾರಂಟ್‌ನ್ನು ಪಡೆಯದ ಒಂದೇ ಕಾರಣಕ್ಕಾಗಿ ಘಟನೆಯು ಸಂಭವಿಸಲೇ ಇಲ್ಲ ಎಂದು ಹೇಳಲು ಬರಲಾರದಾಗಿ ನನ್ನ ಅಭಿಪ್ರಾಯವಾಗಿದೆ ಅಲ್ಲದೇ ಈ ಪ್ರಕರಣದಲ್ಲಿ ಜಪ್ತಿಯಾದ ಅಬಕಾರಿ ಸ್ವತ್ತು ಕಳ್ಳಭಟ್ಟಿ ಸರಾಯಿಯಾಗಿರುವುದರಿಂದ ಇದನ್ನು ಸ್ವಾಧೀನದಲ್ಲಿಟ್ಟುಕೊಳ್ಳುವ ಬಗ್ಗೆ ಘನ ಸರ್ಕಾರವು ಯಾವುದೇ ರೀತಿಯ ಮಿತಿಯನ್ನು ನಿಗದಿಪಡಿಸಿಲ್ಲವಾದ ಕಾರಣ ಎಷ್ಟೇ ಪ್ರಮಾಣದಲ್ಲಿಯೂ ಕಳ್ಳಭಟ್ಟಿ ಸರಾಯಿ ಜಪ್ತಿಯಾದಲ್ಲಿ ಅದರ ಬಗ್ಗೆ ಪ್ರಕರಣ ದಾಖಲಿಸಬೇಕಾಗುತ್ತದೆ.

17. ದಿನಾಂಕ: 17/07/2002 ರಂದು ಈ ಪ್ರಕರಣದ ತನಿಖಾಧಿಕಾರಿಗಳಾದ ವಿ.ಎಸ್. ನಾಯ್ಕ, ಪೊಲೀಸ್ ಇನ್ಸ್‌ಪೆಕ್ಟರ್ ರವರು ಪ್ರಾಧಿಕಾರದಲ್ಲಿ ಹಾಜರಾಗಿ ಮಾನ್ಯ ಎ.ಡಿ.ಪಿ. ಯವರ ಮುಖ್ಯ ವಿಚಾರಣೆಯಲ್ಲಿ ಪಿ.ಡಬ್ಲ್ಯೂ-2 ರಂತೆ ಸಾಕ್ಷಿ ನುಡಿಯುತ್ತಾ, ತಾನು ಈ ಪ್ರಕರಣದ ಮುಂದಿನ ತನಿಖೆಯನ್ನು ಪಿ.ಡಬ್ಲ್ಯೂ-1 ರವರಿಂದ ಹಸ್ತಾಂತರಿಸಿಕೊಂಡು, ಮಾದರಿ ಸೀಸೆಗಳನ್ನು ರಾಸಾಯನಿಕ ವಿಶ್ಲೇಷಣೆಗೆ ಕಳುಹಿಸಿ ತಜ್ಞರ ವರದಿಯನ್ನು ಪಡೆದಿರುವ ಬಗ್ಗೆ ತಿಳಿಸಿರುತ್ತಾರೆ. ನಂತರ ಪಾಟೀ ಸವಾಲಿನಲ್ಲಿ ಮಾದರಿ ಸೀಸೆಗಳನ್ನು ತಾನು ರಾಸಾಯನಿಕ ವಿಶ್ಲೇಷಣೆಗೆ ಕಳುಹಿಸಲಿಲ್ಲ ಎನ್ನುವುದು ಸರಿಯಲ್ಲವೆಂದು ಜೆ.ಎಂ.ಎಫ್.ಸಿ. ನ್ಯಾಯಾಲಯದಲ್ಲಿ ತನ್ನ ಸಾಕ್ಷಿ ಆಗಿದ್ದು, ಆ ಪ್ರಕರಣದಲ್ಲಿ ಆರೋಪಿ ನಿರಪರಾಧಿ ಎಂದು ಬಿಡುಗಡೆಯಾಗಿರುವುದು ತನಗೆ ಗೊತ್ತಿಲ್ಲವೆಂದು ವಾರಸುದಾರರಿಲ್ಲದ ಮಾಲನ್ನು ಉಪಯೋಗಿಸಿ ಈ ಅರ್ಜಿದಾರರ ಮೇಲೆ ಸುಳ್ಳು ಪ್ರಕರಣವನ್ನು ದಾಖಲಿಸಲಾಗಿದೆ ಎನ್ನುವುದು ಸರಿಯಲ್ಲವೆಂದು ನುಡಿದಿರುತ್ತಾರೆ.

**18. ಇಲ್ಲಿ ಗಮನಿಸಬೇಕಾದ ಮುಖ್ಯ ಅಂಶವೇನೆಂದರೆ:-** ಕ್ರಿಮಿನಲ್ ಕೇಸಿನಲ್ಲಿ ಆರೋಪಿಗಳು ಖುಲಾಸೆಯಾಗಿದ್ದಲ್ಲಿ ಆ ಪ್ರಕರಣದಲ್ಲಿ ಅದನ್ನು ಮುಟ್ಟುಗೋಲು ನಡಾವಳಿಯಲ್ಲಿ ಪರಿಗಣನೆಗೆ ತೆಗೆದುಕೊಳ್ಳಬೇಕಾಗಿಲ್ಲವೆಂದು ಗೌರವಾನ್ವಿತ ಉಚ್ಚನ್ಯಾಯಾಲಯ ಬೆಂಗಳೂರು ರವರ ತೀರ್ಪು ಡಿ.ಎಸ್. ವಿಜಯ ಕುಮಾರ್ ವಿರುದ್ಧ ಡೆಪ್ಯೂಟಿ ಕನ್ಸರ್ವೇಟರ್ ಆಫ್ ಫಾರೆಸ್ಟ್, ಹಾಸನ (ಐಎಲ್ಆರ್ 2002, ಕೆ.ಎಆರ್ 1375) ನೇದರಲ್ಲಿ ಈ ಕೆಳಗಿನಂತೆ ತೀರ್ಪಾಗಿರುತ್ತದೆ.

The Contention of the owner of the seized vehicle that non-filing of a criminal case or acquittal of the accused involved in illegal transport of forest produce, takes away the jurisdiction of the Authorised Officers to initiate confiscation proceedings under section 71A, hence confirmed the order of confiscation.

ಆದುದರಿಂದ ಆರೋಪಿಗಳು ಕ್ರಿಮಿನಲ್ ನ್ಯಾಯಾಲಯದಲ್ಲಿ ನಿರ್ದೋಷಿಗಳಾಗಿರುವುದನ್ನು ಈ ಪ್ರಕರಣದಲ್ಲಿ ಪರಿಗಣಿಸಲು ಬರಲಾರದಾಗಿ ನನ್ನ ಅಭಿಪ್ರಾಯವಾಗಿದೆ. ಈ ಎಲ್ಲಾ ಕಾರಣಗಳಿಂದ ಅಭಿಯೋಜನೆ ಪಕ್ಷದವರು ಘಟನೆ ಸಂಭವಿಸಿರುವುದನ್ನು ನಿಸ್ಸಂಶಯವಾಗಿ ನಿರೂಪಿಸಿರುವುದು ಕಂಡುಬರುವುದರಿಂದ ಮೊದಲನೆಯ ವಿವಾದಾಂಶವನ್ನು ಸಕಾರಾತ್ಮಕವಾಗಿ ಉತ್ತರಿಸಲಾಗಿದೆ.

21. ಅರ್ಜಿದಾರರಾದಂತಹ ಗಣೇಶ ವಿನಾಯಕ ಅಂಬಿಗ ಇವರು ಈ ಪ್ರಾಧಿಕಾರದಲ್ಲಿ ದಿನಾಂಕ: 29/09/2004 ರಂದು ಹಾಜರಾಗಿ ತನ್ನ ಪರ ವಕೀಲರ ಮುಖ್ಯ ವಿಚಾರಣೆಗೆ ಡಿಡಬ್ಲ್ಯೂ-1 ರಂತೆ ಉತ್ತರಿಸುತ್ತಾ, ಈ ಪ್ರಕರಣದಲ್ಲಿ ಹೇಳಿದ ತಾರೀಖಿನಂದು ಸದರಿ ಮೋಟಾರ್ ಸೈಕಲ್ ತನ್ನ ಮನೆಯಲ್ಲಿತ್ತೆಂದೂ, ಸದರಿ ದಿನದಂದು ತನ್ನ ವಾಹನವನ್ನು ಬೇರೆ ಯಾರೂ ಕೂಡ ಹೊನ್ನಾವರದ ಕರ್ಕಿಗೆ ತೆಗೆದುಕೊಂಡು ಹೋಗಿರುವುದಿಲ್ಲವೆಂದೂ, ಪೊಲೀಸರು ತನ್ನ ಬೆನ್ನಟ್ಟಿ ಹಿಡಿದಿರುವುದಿಲ್ಲವೆಂದು ತನ್ನ ಮೋಟಾರ್ ಸೈಕಲ್ ತನ್ನ ಮನೆಯಲ್ಲಿರುವ ಕಾಲಕ್ಕೆ ಪೊಲೀಸರು ತೆಗೆದುಕೊಂಡು ಹೋಗಿರುತ್ತಾರೆಂದೂ ತಾನು ಆ ಕಾಲದಲ್ಲಿ ಮನೆಯಲ್ಲಿರದೇ ಹೊಲಕ್ಕೆ ಹೋಗಿದ್ದೆನೆಂದೂ ನಂತರ ತಾನು ಮನೆಗೆ ಬಂದಾಗ ಪೊಲೀಸರು ತನ್ನ ವಾಹನವನ್ನು ತೆಗೆದುಕೊಂಡು ಹೋದ ವಿಚಾರ ತನಗೆ ಗೊತ್ತಾಯಿತೆಂದು ನುಡಿದಿದ್ದು, ನಂತರ ಪಾಟೀ ಸವಾಲಿನಲ್ಲಿ ಹೊನ್ನಾವರ ಪೊಲೀಸರು ತನ್ನ ವಾಹನ ಸಂಖ್ಯೆ: ಕೆಎ-30/574 ರಲ್ಲಿ ಅಕ್ರಮ ಸರಾಯಿ ಸಾಗಾಟ ಮಾಡಿದ ಬಗ್ಗೆ ಪ್ರಕರಣ ದಾಖಲು ಮಾಡಿದ್ದು ಇರುತ್ತದೆಂದೂ, ಹೊನ್ನಾವರ ಪೊಲೀಸರಿಗೆ ತನ್ನ ಮೇಲೆ ಪಂಚನಾಮೆಗೆ ಸಹಿ ಹಾಕದಿರುವ ಬಗ್ಗೆ ದ್ವೇಷ ಇದೆ ಎಂದೂ, ತಾನು ಹೊನ್ನಾವರ ಪೊಲೀಸರಿಗೆ ಪಂಚಸಾಕ್ಷಿದಾರ ಅಂತ ಈ ಹಿಂದೆ ಯಾವಾಗಲೂ ಕೂಡ ಸಹಿ ಕೊಟ್ಟಿರುವುದಿಲ್ಲವೆಂದೂ, ಈ ಬಗ್ಗೆ ತಾನು ಪೊಲೀಸ್ ವರಿಷ್ಠಾಧಿಕಾರಿಗಳಿಗೆ ತಿಳಿಸಿರುವುದಿಲ್ಲವೆಂದೂ, ಪೊಲೀಸ್ ತನಿಖಾಧಿಕಾರಿ ನ್ಯಾಯಾಲಯದ ಮುಂದೆ ಪ್ರಕರಣಕ್ಕೆ ಸಂಬಂಧಿಸಿದ ಫಿರ್ಯಾದಿ, ಪಂಚನಾಮೆ ಹಾಗೂ ಸಾಕ್ಷಿದಾರರ ಹೇಳಿಕೆಗಳು ತಾನು ಹೊನ್ನಾವರದ ಕರ್ಕಿಯಲ್ಲಿ ತನ್ನ ವಾಹನದಲ್ಲಿ ಅಕ್ರಮವಾಗಿ ಸರಾಯಿ ಸಾಗಾಟ ಮಾಡಿದ ಬಗ್ಗೆ ಹೇಳುತ್ತವೆ ಎನ್ನುವುದು ಸರಿಯಲ್ಲವೆಂದು ಮತ್ತು ಸದ್ರಿ ದಿವಸ ತಾನು ತನ್ನ ವಾಹನದಲ್ಲಿ ಸಾರಾಯಿ ಸಾಗಾಟ ಮಾಡುತ್ತಿದ್ದಾಗ ಪೊಲೀಸರನ್ನು ನೋಡಿದಾಕ್ಷಣ ತನ್ನ ವಾಹನವನ್ನು ಅಲ್ಲಿಯೇ ಬಿಟ್ಟು ಓಡಿಹೋಗಿದ್ದೇನೆ ಎಂಬುವುದು ಸರಿಯಲ್ಲವೆಂದು ನುಡಿದಿರುತ್ತಾರೆ.

**22. ಇಲ್ಲಿ ಗಮನಿಸಬೇಕಾದ ಮುಖ್ಯ ಅಂಶವೇನೆಂದರೆ:-** ಅರ್ಜಿದಾರರು ದಿನಾಂಕ: 01/06/1999 ರಂದು ಈ ಪ್ರಾಧಿಕಾರದಲ್ಲಿ ಸಲ್ಲಿಸಿದ ಅರ್ಜಿಯಲ್ಲಿ ತನ್ನ ವಾಹನವನ್ನು ತನ್ನ ಮನೆಯಿಂದ ಫಿರ್ಯಾದಿ ಕಡೆಯವರು ತೆಗೆದುಕೊಂಡು ಹೋದರೆಂಬ ಬಗ್ಗೆ ಎಲ್ಲಿಯೂ ವಿವರಿಸಿಲ್ಲ ಅಲ್ಲದೇ ಪ್ರಾಧಿಕಾರದಿಂದ ನೀಡಲಾದ ಕಾರಣಕೇಳಿ ನೋಟೀಸಿಗೆ ದಿನಾಂಕ: 28.07.1999 ರಂದು ನೀಡಿದ

ಸಮಜಾಯಿಷಿಯಲ್ಲಿಯೂ ಸಹ ಈ ಬಗ್ಗೆ ತಿಳಿಸಿಲ್ಲ ವಾಹನವನ್ನು ಫಿರ್ಯಾದಿ ಕಡೆಯವರು ಕರ್ಕಿ ತೊಪ್ಪಲಕೇರಿ ಕ್ರಾಸ್‌ನಲ್ಲಿ ಜಪ್ತು ಮಾಡಿದ ಬಗ್ಗೆ ಅಭಿಯೋಜನೆ ಕಡೆಯವರಿಂದ ದಾಖಲೆಗಳಿದ್ದು, ಅರ್ಜಿದಾರನ ಮನೆಯಿಂದ ಪೊಲೀಸರು ವಾಹನವನ್ನು ಎಳೆದೊಯ್ದ ಬಗ್ಗೆ ಎದುರುದಾರರ ಕಡೆಯವರಿಂದ ಯಾವುದೇ ರೀತಿಯ ದಾಖಲೆಯನ್ನು ನೀಡಿಲ್ಲ. ಅಂದರೆ ಈ ಸಮಯದಲ್ಲಿ ಭಾವ ಚಿತ್ರ ತೆಗೆದು ಅದನ್ನು ಈ ಪ್ರಾಧಿಕಾರದಲ್ಲಿ ಪುರಾವೆಗಾಗಿ ಸಲ್ಲಿಸಬಹುದಾಗಿತ್ತು. ವಾಹನದ ಚಾವಿಯನ್ನು ಪೊಲೀಸರಿಗೆ ಯಾರು ನೀಡಿದರೆಂಬ ಬಗ್ಗೆ ಸಹ ವಿವರಿಸಿಲ್ಲ. ಈ ಪ್ರಕರಣದ ಆರೋಪಿಯೇ ವಾಹನದ ಮಾಲೀಕನಾಗಿದ್ದು ಸದರಿ ಅರ್ಜಿದಾರ/ವಾಹನ ಮಾಲೀಕನೇ ನೇರವಾಗಿ ಶಾಮೀಲಾಗಿ ಆತನ ಅರಿವಿದ್ದುಕೊಂಡೇ ಈ ಪ್ರಕರಣದಲ್ಲಿ ಜಪ್ತಿಯಾದಂತಹ 70 ಲೀಟರ್ ಕಳ್ಳಭಟ್ಟಿ ಸರಾಯಿಯನ್ನು ಸಾಗಿಸಿರುವುದು ಲಭ್ಯವಿರುವ ದಾಖಲೆಗಳು ಹಾಗೂ ಅಭಿಯೋಜನೆ ಪಕ್ಷದವರ ಹೇಳಿಕೆಗಳಿಂದ ಕಂಡುಬರುತ್ತದೆ. ಹೀಗಾಗಿ ಎರಡನೆಯ ವಿವಾದಾಂಶವನ್ನು ತೃಪ್ತಿಕರವಾಗಿ ನಿರೂಪಿಸಲು ಎದುರುದಾರರ ಪಕ್ಷದವರು ವಿಫಲರಾಗಿರುವ ಪ್ರಯುಕ್ತ ಸದರಿ ವಿವಾದಾಂಶವನ್ನು ನಕಾರಾತ್ಮಕವಾಗಿ ಉತ್ತರಿಸಲಾಗಿದೆ.

23. ಮೊದಲನೆಯ ಮತ್ತು ಎರಡನೆಯ ವಿವಾದಾಂಶದಿಂದ ಪಡೆದ ಉತ್ತರದಿಂದಾಗಿ ಈ ಪ್ರಕರಣದಲ್ಲಿ ಜಪ್ತಿ ಮಾಡಲ್ಪಟ್ಟ ವಾಹನದಲ್ಲಿ ಅಕ್ರಮವಾಗಿ ಕಳ್ಳಭಟ್ಟಿ ಸರಾಯಿಯನ್ನು ಸಾಗಿಸಿರುವುದು ಸಾಬೀತಾಗಿರುವುದರಿಂದ ಹಾಗೂ ಮಾನ್ಯ ಸೆಷನ್ಸ್ ನ್ಯಾಯಾಲಯ ಕಾರವಾರ ರವರ ಕ್ರಿಮಿನಲ್ ಅಪೀಲ್ ಸಂಖ್ಯೆ: 62/2001 ದಿನಾಂಕ: 15.07.2004 ಹಾಗೂ ಕ್ರಿಮಿನಲ್ ಅಪೀಲ್ ಸಂಖ್ಯೆ: 183/2001 ದಿನಾಂಕ: 21.07.2004 ರಂತೆ ಈ ಪ್ರಾಧಿಕಾರದ ಆದೇಶವನ್ನು ಎತ್ತಿ ಹಿಡಿದಿರುವುದರಿಂದ ಮೂರನೆಯ ವಿವಾದಾಂಶವನ್ನು ಸಕಾರಾತ್ಮಕವಾಗಿ ಉತ್ತರಿಸುತ್ತಾ, ಸದರಿ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡು ಬಂದಿರುವುದರಿಂದ ಈ ಕೆಳಗಿನಂತೆ

**ಆದೇಶ**

ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43ಬಿ ಪ್ರಕಾರ ಅನುಸರಿಸಬೇಕಾದಂತಹ ಕ್ರಮಗಳನ್ನೆಲ್ಲಾ ಅನುಸರಿಸಿದ ನಂತರ ಕಲಂ 43ಎ(1) ರಲ್ಲಿ ನನಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಹೊನ್ನಾವರ ಪೊಲೀಸ್ ಠಾಣೆಯ ಗುನ್ಹೆ ಸಂಖ್ಯೆ: 132/99, ದಿನಾಂಕ: 17.05.1999 ರಲ್ಲಿ ಜಪ್ತಿಯಾದಂತಹ ಯಮಹ ಮೋಟರ್ ಸೈಕಲ್ ಸಂಖ್ಯೆ: ಕೆಎ-30/ಎಚ್-574 ನೇದನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿ ಆದೇಶಿಸಿದ್ದೇನೆ.

ಈ ಪ್ರಾಧಿಕಾರದ ಆದೇಶ ಸಂಖ್ಯೆ: ಅಬಕಾರಿ/ಸಿಆರ್‌ಎಂ/ಡಿಟಿಸಿಆರ್/22/1999-2000 ದಿನಾಂಕ: 22.07.1999 ರಂತೆ ಸದ್ರಿ ವಾಹನವನ್ನು ಮಧ್ಯಂತರ ವಶಕ್ಕೆ ಬಿಡುಗಡೆ ಮಾಡಲಾದ ಆದೇಶವನ್ನು ಹಿಂಪಡೆದಿರುತ್ತೇನೆ.

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಅಮಲಿನಲ್ಲಿ ಬರುವುದು.

(ಈ ಆದೇಶವನ್ನು ಇಂದು ಅಂದರೆ 2004ನೇ ಇಸ್ವಿಯ ಸೆಪ್ಟೆಂಬರ್ ತಿಂಗಳ 30ನೇ ತಾರೀಖಿನಂದು ವಿಷಯ ನಿರ್ವಾಹಕರಿಗೆ ಉಕ್ತ ಲೇಖನ ನೀಡಿ ನಂತರ ಬೆರಳಚ್ಚು ಮಾಡಿಸಿ, ಬೆರಳಚ್ಚಿಸಿದ ಪ್ರತಿಯನ್ನು ಗಣಕೀಕೃತಗೊಳಿಸಿ ತಿದ್ದಿದ ನಂತರ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.)

**ಅನುಬಂಧ-1**

**(ಪ್ರಾಸಿಕ್ಯೂಷನ್ ಪರ ಸಾಕ್ಷಿದಾರರ ಪಟ್ಟಿ)**

ಪ್ರಾ.ಸಾ.ನಂ.1:- ಪಾಂಡುರಂಗ ಗೋವಿಂದ ನಾಯ್ಕ, ಎಎಸ್‌ಐ

ಪ್ರಾ.ಸಾ.ನಂ.2:- ವಿನಯ ಎಸ್ ನಾಯಕ, ಪಿಐ

**ಅನುಬಂಧ-2**

**(ಎದುರುದಾರರ ಪರ ಸಾಕ್ಷಿದಾರರ ಪಟ್ಟಿ)**

ಡಿ.ಡಬ್ಲ್ಯೂ.1:- ಗಣೇಶ ವಿನಾಯಕ ಅಂಬಿಗ

**ಅನುಬಂಧ-3**

**(ಪ್ರಾಸಿಕ್ಯೂಷನ್ ಪರ ಗುರ್ತಿಸಲಾದ ದಾಖಲೆಗಳು)**

| | | |
|---|---|---|
| ನಿಶಾನೆ ಪಿ1 | : | ಮಹಜರ |
| ನಿಶಾನೆ ಪಿ1ಎ | : | ಮಹಜರ ಮೇಲಿನ ಫಿರ್ಯಾದುದಾರರ ಸಹಿ |
| ನಿಶಾನೆ ಪಿ1ಬಿ | : | ಮಹಜರ ಮೇಲಿನ ಪಂಚಸಾಕ್ಷಿದಾರ ನಂ.1 ನೆಯವರ ಸಹಿ |
| ನಿಶಾನೆ ಪಿ1ಸಿ | : | ಪಂಚಸಾಕ್ಷಿ ನಂ.2 ನೆಯವರ ಸಹಿ |
| ನಿಶಾನೆ ಪಿ2 | : | ಪ್ರ.ಮಾ. ವರದಿ |
| ನಿಶಾನೆ ಪಿ2ಎ | : | ಪ್ರ.ಮಾ. ವರದಿ ಮೇಲಿನ ಸಹಿ |
| ನಿಶಾನೆ ಪಿ3 | : | ಸ್ವತ್ತಿನ ಪಟ್ಟಿ |
| ನಿಶಾನೆ ಪಿ3ಎ | : | ಸ್ವತ್ತಿನ ಪಟ್ಟಿಯ ಮೇಲಿನ ಸಹಿ |
| ನಿಶಾನೆ ಪಿ4 | : | ರಾಸಾಯನಿಕ ವಿಶ್ಲೇಷಣಾ ವರದಿ |
| ನಿಶಾನೆ ಪಿ4ಎ | : | ರಾಸಾಯನಿಕ ವಿಶ್ಲೇಷಣಾ ವರದಿಯ ಮೇಲಿನ ಸಹಿ |

**ಅನುಬಂಧ-4**

**(ಎದುರುದಾರರ ಪರ ಗುರ್ತಿಸಲಾದ ದಾಖಲೆಗಳು)**

- ಇಲ್ಲಾ -

**ಕೆ.ಸಿ. ಹರಿದಾಸ್**

ಪಿ.ಆರ್. 1459 ಅಧಿಕೃತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಜ್, ಉತ್ತರ ಕನ್ನಡ ಜಿಲ್ಲೆ, ಕಾರವಾರ.